# PACKAGE TOURS 2015

Hotel Room Accom. & South Indian Veg. Food

## Shaktipeetha Manali Special : 18 Days

Oct 23



Wagah Border [Indo-Pak Border], Amritsar, Vaishnavi Devi, Chamunda, Kangra, Chintapurni, Jwalamukhi, Baijnath, Kullu-Manali, Vasista, Rohtang Pass [Optional], Naina Devi, Kufri, Shimla, Chandigarh, Kurukshetra, New Delhi

## South India : 10 Days

Nov 27



Guruvayur, Kaladi, Trivandram, Suchindram, Kovalam Beach, Kanyakumari, Rameshwaram, Madurai, Trichy, Srirangam, Tanjore, Kumbakonam, Chidambaram, Thiruvannamalai, Navagraha Temples

## Mini Andhra : 05 Days

Nov 22 Dec 09



Mantralaya, Srishailam, Mahanandi, Ahobila, Nava Narasimha Temples (Jwala, Pavana, Malola, Kroda, Karanja, Bhargava, Yogananda, Chatravata & Pavana)

## Dwarka & Jyothirlinga : 24 Days

Oct 29



Jaipur, Pushkar, Ajmer, Nathadwar, Kankroli, Eklingji, Udaipur, Mt. Abu, Mathru Gaya, Dwarka, Bet Dwarka, Nagesham, Mul Dwarka, Porbandar, Veraval, Somnath, Dakor, Ahmedabad, Ujjain, Omkareshwar, Parli, Aurangabad, Ellora, Grishneshwar, Triyambak, Nasik, Shirdi, Shanisinganapur, Bhimashankar.

## INTERNATIONAL TOURS



**Dubai, Singapore, Malaysia, Thailand, Sri Lanka**



# Shri Hansaa Travels

**Recognised by Department of Tourism, Govt. of Karnataka**


: 640, 40th Cross, 8th Block, Jayanagar, Bangalore - 70

: hansaatravels@gmail.com : hansaatravels.com

080-26643276 / 26543891 / 9341215612 / 9341415612

ವ್ಯವಸ್ಥಾಪಕ ಸಂಪಾದಕರು

*ಸ್ವಾಮಿ ಮುಕ್ತಿದಾನಂದ*

ಸಂಪಾದಕರು

*ಸ್ವಾಮಿ ಜ್ಞಾನಯೋಗಾನಂದ*

ನೆರವು:

*ಆರ್. ಎಸ್. ಪೂರ್ಣಾನಂದ*

*ಡಾ. ಕೆ. ಎಲ್. ಪ್ರಸನ್ನಾಕ್ಷಿ*

*ಡಾ. ಎಚ್. ಪಾಂಡುರಂಗ ವಿಠಲ*

ಅಕ್ಷರ ಜೋಡಣೆ

*ಶ್ರೀರಾಮಕೃಷ್ಣ ಆಶ್ರಮ, ಮೈಸೂರು*

ಮುದ್ರಣ

*ಮಯೂರ್ ಗ್ರಾಫಿಕ್ಸ್, ಬೆಂಗಳೂರು*



E-mail:

vivekaprabha@hotmail.com

kannada.vivekaprabha@gmail.com

Website: vivekaprabha.net

ಫೋನ್ : 9481533505


ಮುಖಪುಟ:

ಮಹಿಷಾಸುರ ವಧೆ

ಒಡಿಶಾದ ಸಾಂಪ್ರದಾಯಿಕ ಕಲೆ

### ಈ ಪತ್ರಿಕೆಯ ಧ್ಯೇಯ

'ನಾವು ಪತ್ರಿಕೆಯ ಮೂಲಕ ಸಕಲ ವಿಚಾರಗಳಲ್ಲಿಯೂ ಜೀವನಪೋಷಕ ಆದರ್ಶಗಳನ್ನು ಜನರಿಗೆ ಕೊಡಬೇಕು... ವೇದವೇದಾಂತಗಳ ಉಚ್ಚ ಭಾವನೆಗಳನ್ನು ಸುಲಭವಾದ ಮಾತುಗಳಲ್ಲಿ ಜನರಿಗೆ ತಿಳಿಸಿಕೊಡಬೇಕು.'

– *ಸ್ವಾಮಿ ವಿವೇಕಾನಂದ*


ಚಂದಾ ವಿವರ

ಬಿಡಿ ಪ್ರತಿ: ₹ 14

ವಾರ್ಷಿಕ: ₹ 140

ಮೂರು ವರ್ಷ: ₹ 375

ಆಜೀವ (25 ವರ್ಷ): ₹ 3,000

ಪೋಷಕರು : ₹ 5,000 ಅಥವಾ ಹೆಚ್ಚು.

ವಿದೇಶಗಳಿಗೆ: (ಏರ್‌ಮೇಲ್)

ವಾರ್ಷಿಕ: $ 20; ಮೂರು ವರ್ಷ: $ 60

ಆಜೀವ (25ವರ್ಷ): $ 300

ಪೋಷಕರು: $ 600 ಅಥವಾ ಹೆಚ್ಚು.

ಚಂದಾ ಹಣವನ್ನು (Sri Ramakrishna Ashrama, Viveka Prabha A/c ಹೆಸರಿಗೆ) ಎಂ.ಓ. ಅಥವಾ ಡಿ.ಡಿ. ಮೂಲಕ ಮಾತ್ರ ಕಳುಹಿಸಬೇಕು. ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ. ಆಜೀವ ಚಂದಾದಾರರು ಮತ್ತು ಪೋಷಕರಿಗೆ ಮೈಸೂರು ಆಶ್ರಮದ ಪುಸ್ತಕಗಳ ಮೇಲೆ ಮೈಸೂರು ಆಶ್ರಮದ ಮೂಲಕ ನೇರವಾಗಿ ಕೊಂಡಾಗ ಮಾತ್ರ ಶೇ. 20 ರಷ್ಟು ರಿಯಾಯಿತಿ ಕೊಡಲಾಗುವುದು. ಪೋಷಕ ಸಹಾಯಧನಕ್ಕೆ 80-G ಅಧಿನಿಯಮದ ಪ್ರಕಾರ ವರಮಾನ ತೆರಿಗೆ ವಿನಾಯಿತಿ ಇದೆ. ಪೋಷಕರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು.



ಅಕ್ಟೋಬರ್-2015 ಸಂಪುಟ 16 ಸಂಚಿಕೆ 10




# ವಿವೇಕ ಪ್ರಭ

## ಪರಿವಿಡಿ



















**ಶು**ಕ್ರನು ಕಾಲಕ್ರಮೇಣ ಮದುವೆಯಾದನು; ಮಗನನ್ನು ಪಡೆದನು. ಮಗನೆಂದರೆ ಅವನಿಗೆ ವಿಪರೀತ ಹುಚ್ಚು. ಹೀಗೆ ಅವನ ಮನಸ್ಸು ಸಂಪೂರ್ಣವಾಗಿ ಪ್ರಾಪಂಚಿಕ ವಸ್ತುಗಳ ವಶವಾಯಿತು....





ಪ್ರಾರ್ಥನೆ

# ದೇವೀಪ್ರಾತಃಸ್ಮರಣಸ್ತೋತ್ರಮ್



ಪ್ರಾತಃಸ್ಮರಾಮಿ ಶರದಿಂದುಕರೋಜ್ಜ್ವಲಾಭಾಂ
ಸದ್ರತ್ನವನ್ಮಕರಕುಂಡಲಹಾರಭೂಷಾಮ್ ।
ದಿವ್ಯಾಯುಧೋರ್ಜಿತಸುನೀಲಸಹಸ್ರಹಸ್ತಾಂ
ರಕ್ತೋತ್ಪಲಾಭಚರಣಾಂ ಭವತೀಂ ಪರೇಶಾಮ್॥

ಯಾರ ಕಾಂತಿಯು ಶರತ್ಕಾಲದ ಚಂದ್ರನ ಕಿರಣದಂತೆ ಉಜ್ಜ್ವಲವಾಗಿದೆಯೋ, ಯಾರು ಉತ್ತಮವಾದ ಮಕರಾಕೃತಿಯ ಕುಂಡಲ ಹಾಗೂ ಹಾರದಿಂದ ಭೂಷಿತಳೋ, ಯಾರ ನೀಲ ವರ್ಣದ ಸಹಸ್ರ ಕರಗಳು ದಿವ್ಯಾಯುಧಗಳಿಂದ ಸಂಪನ್ನವಾಗಿವೆಯೋ, ಅಂತೆಯೇ ಯಾರ ಪಾದಗಳು ಕೆಂದಾವರೆಯ ಕಾಂತಿಯಂತೆ ಅರುಣವರ್ಣದಿಂದ ಕೂಡಿವೆಯೋ, ಅಂತಹ ಪರಮೇಶ್ವರಿಯನ್ನು ನಾನು ಪ್ರಾತಃಕಾಲದಲ್ಲಿ ಸ್ಮರಿಸುತ್ತೇನೆ.

ಪ್ರಾತರ್ನಮಾಮಿ ಮಹಿಷಾಸುರಚಂಡಮುಂಡ-
ಶುಂಭಾಸುರಪ್ರಮುಖದೈತ್ಯವಿನಾಶದಕ್ಷಾಮ್ ।
ಬ್ರಹ್ಮೇಂದ್ರರುದ್ರಮುನಿಮೋಹನಶೀಲಲೀಲಾಂ
ಚಂಡೀಂ ಸಮಸ್ತಸುರಮೂರ್ತಿಮನೇಕರೂಪಾಮ್ ॥

ಮಹಿಷ, ಚಂಡ, ಮುಂಡ, ಶುಂಭ ಮೊದಲಾದ ದೈತ್ಯರನ್ನು ನಾಶಮಾಡುವಲ್ಲಿ ಸಮರ್ಥಳಾದ, ಬ್ರಹ್ಮ, ಇಂದ್ರ, ರುದ್ರ, ಮುನಿಗಳನ್ನು ತನ್ನ ಮೋಹಜಾಲದಲ್ಲಿ ಬೀಳಿಸಬಲ್ಲ ಲೀಲೆಯನ್ನು ಹೊಂದಿರುವ, ಸಕಲದೇವತಾಸ್ವರೂಪಿಣಿಯೂ ಅನೇಕ ರೂಪಿಯೂ ಆದ ಚಂಡಿಯನ್ನು ಪ್ರಾತಃಕಾಲದಲ್ಲಿ ನಮಿಸುತ್ತೇನೆ.

ಪ್ರಾತರ್ಭಜಾಮಿ ಭಜತಾಮಭಿಲಾಷದಾತ್ರೀಂ
ಧಾತ್ರೀಂ ಸಮಸ್ತಜಗತಾಂ ದುರಿತಾಪಹಂತ್ರೀಮ್ ।
ಸಂಸಾರಬಂಧನವಿಮೋಚನಹೇತುಭೂತಾಂ
ಮಾಯಾಂ ಪರಾಂ ಸಮಧಿಗಮ್ಯ ಪರಸ್ಯ ವಿಷ್ಣೋಃ ॥

ಬೇಡಿದವರ ಅಭಿಲಾಷೆಗಳನ್ನು ಪೂರೈಸುವ, ಸಮಸ್ತ ಜಗತ್ತನ್ನೂ ಪೋಷಿಸುವ, ದುರಿತಗಳನ್ನೆಲ್ಲ ದೂರಮಾಡುವ, ಪರಾತ್ಪರನಾದ ವಿಷ್ಣುವಿನ ಮಾಯಾಸ್ವರೂಪಿಣಿಯಾಗಿ ಸಂಸಾರ ಬಂಧನದಿಂದ ಬಿಡಿಸಲು ಕಾರಣಳಾದ ದೇವಿಯನ್ನು ಪ್ರಾತಃಕಾಲದಲ್ಲಿ ಭಜಿಸುತ್ತೇನೆ.

# ಸೂಕ್ತಿಪ್ರಭ

ದೇವರನ್ನು ಕುರಿತು ಆಗಾಗ ಚಿಂತಿಸಿ; ರಾತ್ರಿಹಗಲು, ನಿಮ್ಮ ಕೆಲಸಗಳ ನಡುವೆ ಮತ್ತು ನಿಮ್ಮ ಚಿತ್ತಚಾಂಚಲ್ಯದ ನಡುವೆಯೂ ಅವನನ್ನು ಚಿಂತಿಸಿ. ಅವನು ಯಾವಾಗಲೂ ನಿಮಗೆ ಸಮೀಪವೇ ಇದ್ದಾನೆ. ಅವನನ್ನು ಒಬ್ಬಂಟಿಯಾಗಿರಲು ಬಿಡಬೇಡಿ.

*–ಬ್ರದರ್ ಲಾರೆನ್ಸ್*

ಯಾರು ದೃಢ ನಿಶ್ಚಯ ಮಾಡಿ, ಏನೇ ಬಂದರೂ ಸತ್ಯವನ್ನು ಬಿಡದೆ ಇರುವನೋ ಅವನಿಗೆ ಸದ್ಗುಣಗಳೆಲ್ಲವೂ ಬರುತ್ತವೆ. ಸದ್ಗುಣಗಳಿಂದ ಅವನ ಕೀರ್ತಿ, ಗೌರವ ಉನ್ನತಿಗೇರುವುದು. ಅದರಿಂದ ಅವನು ಸತ್ಯನಿಷ್ಠೆಯನ್ನು ಹೊಂದುತ್ತಾನೆ. ಈ ಸತ್ಯನಿಷ್ಠೆಯೇ ಅವನ ಶಕ್ತಿ , ಮಹಿಮೆಗಳ ಮೂಲಸೆಲೆಯಾಗುವುದು.

*–ದಯಾನಂದ ಸರಸ್ವತೀ*

ಒಬ್ಬ ಒಳ್ಳೆಯ ವ್ಯಕ್ತಿಯ ಜೀವನದಲ್ಲಿ ಅತ್ಯುತ್ತಮವಾದ ಸಮಯವೆಂದರೆ : ಹೆಸರಿಲ್ಲದ, ನೆನಪಿನಲ್ಲಿ ಉಳಿಯದ, ಸಣ್ಣ ಸಣ್ಣ ಅನುಕಂಪದ, ಪ್ರೀತಿಯ ಕ್ರಿಯೆಗಳು.

*–ವಿಲಿಯಂ ವರ್ಡ್ಸ್‌ವರ್ತ್*

ಎಲ್ಲರೂ ಹಿಡಿದಿಹರು ಬೆಳಗುರತ್ನವನು
ಎಲ್ಲರೂ ತಬ್ಬಿಹರು ಮುತ್ತುಮಾಣಿಕ್ಯವನು;
ಸುತ್ತ ಗಮನಿಸಿ ನೀನು ಒಳಗೆ ನೋಡದಿರೆ
ನಿಧಿಯ ಹಿಡಿದೇ ಜಗವನೆಲ್ಲ ಅಲೆವೆ.

*–ಬೋಧಿಧರ್ಮ*



# ಶ್ರೀರಾಮಕೃಷ್ಣ ಶಾರದಾಶ್ರಮ

ಪೊನ್ನಂಪೇಟೆ –571 216, ಕೊಡಗು ಜಿಲ್ಲೆ ಫೋನ್: 08274–249040, 09448413233
e-mail: srkseva@gmail.com, srksevaponnampet@gmail.com
Web: www.rkmponnampet.org

## ಆಧ್ಯಾತ್ಮಿಕ ಶಿಬಿರ

**25–10–2015 ರಿಂದ 27–10–2015**

ಪೊನ್ನಂಪೇಟೆಯಲ್ಲಿ ನಿರ್ಮಾಣವಾಗಿರುವ ಶ್ರೀರಾಮಕೃಷ್ಣ ವಿಶ್ವಭಾವೈಕ್ಯ ಮಂದಿರದ 6ನೇ ವಾರ್ಷಿಕೋತ್ಸವದ ಪ್ರಯುಕ್ತ, **2015 ಅಕ್ಟೋಬರ್ 25 ರಿಂದ 27 ರವರೆಗೆ,** 3 ದಿನಗಳ ಆಧ್ಯಾತ್ಮಿಕ ಶಿಬಿರವನ್ನು ಆಯೋಜಿಸಲಾಗಿದೆ. ರಾಮಕೃಷ್ಣ ಮಠದ ಹಿರಿಯ ಯತಿಗಳಾದ ಸ್ವಾಮಿ ಜಗದಾತ್ಮಾನಂದಜಿ, ಸ್ವಾಮಿ ರಾಘವೇಶಾನಂದಜಿ, ಸ್ವಾಮಿ ನಿತ್ಯಸ್ಥಾನಂದಜಿ, ಸ್ವಾಮಿ ಮುಕ್ತಿದಾನಂದಜಿ ಮತ್ತಿತರರು ಈ ಶಿಬಿರದಲ್ಲಿ ಭಕ್ತರಿಗೆ ಮಾರ್ಗದರ್ಶನ ನೀಡಲಿದ್ದಾರೆ ಮತ್ತು ನಾಡಿನ ಹಲವು ಖ್ಯಾತ ವಾಗ್ಮಿಗಳು ಪ್ರವಚನಗಳನ್ನು ನೀಡಲಿದ್ದಾರೆ. ಸಾಂಸ್ಕೃತಿಕ ಕಾರ್ಯಕ್ರಮಗಳೂ ಆಯೋಜಿತವಾಗಿವೆ.

**ನೋಂದಣಿ ಶುಲ್ಕ** : ***ವಸತಿ ರಹಿತ :*** **ರೂ. 600/–** ***ವಸತಿ ಸಹಿತ :*** **ರೂ. 1000/–**

*(ಡಾರ್ಮಿಟರಿ ಮಾದರಿ ವಸತಿ ಒದಗಿಸಲಾಗುವುದು. ಸಮೀಪದ ಹೋಟೆಲ್‌ನಲ್ಲಿ ವಸತಿ ಬೇಕಾದಲ್ಲಿ ಅಲ್ಲಿನ ಮೊತ್ತವನ್ನು ತಾವೇ ಭರಿಸಬೇಕಾಗುವುದು.)*

**ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ : 15.10.2015**

(ಅರ್ಜಿಯಲ್ಲಿ ಹೆಸರು, ವಯಸ್ಸು, ವಿಳಾಸ ಮತ್ತು ದೂರವಾಣಿ ಸಂಖ್ಯೆಗಳನ್ನು ನೀಡಬೇಕು. ನಿಗದಿತ ಅರ್ಜಿಯನ್ನು ಆಶ್ರಮದ ವೆಬ್‌ಸೈಟಿನಿಂದ ಕೂಡ ಪಡೆಯಬಹುದಾಗಿದೆ.)

ಭಕ್ತಾದಿಗಳು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ದಿವ್ಯತ್ರಯರ ಕೃಪೆಗೆ ಪಾತ್ರರಾಗಬೇಕೆಂದು ಕೋರಲಾಗಿದೆ.

ಭಗವತ್ಸೇವೆಯಲ್ಲಿ ತಮ್ಮ,

**ಸ್ವಾಮಿ ಬೋಧಸ್ವರೂಪಾನಂದ**

ಅಧ್ಯಕ್ಷರು

# ವಿವೇಕಪ್ರಭ

**ಪರಿಪೂರ್ಣ ಜೀವನದ ಪರಮಾಪ್ತ ಪತ್ರಿಕೆ**

**ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ ಕಾರ್ಯಾಲಯ, ಯಾದವಗಿರಿ, ಮೈಸೂರು 570 020**



## ಚಂದಾ ಅರ್ಜಿ

ಮಾನ್ಯರೇ, (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

☐ ನನ್ನನ್ನು / ಈ ಕೆಳಕಂಡ ಹೆಸರಿನವರನ್ನು 'ವಿವೇಕಪ್ರಭ' ಪತ್ರಿಕೆಯ ಚಂದಾದಾರರನ್ನಾಗಿ/ ಪೋಷಕರನ್ನಾಗಿ ಮಾಡಬೇಕಾಗಿ ವಿನಂತಿ

☐ ನನ್ನ/ ಕೆಳಕಂಡ ಹೆಸರಿನವರ ಚಂದಾವನ್ನು ನವೀಕರಿಸಬೇಕಾಗಿ ವಿನಂತಿ. ಈಗಿನ ಚಂದಾಸಂಖ್ಯೆ.........................

**ನನ್ನ ವಿಳಾಸ**

ನನ್ನ ಹೆಸರು.................................................................

ವಿಳಾಸ.........................................................................

...................................................................................

.........................................................ಪಿನ್.......................

**ಪತ್ರಿಕೆ ಪಡೆಯುವವರ ವಿಳಾಸ**

ಹೆಸರು..........................................................................

ವಿಳಾಸ.........................................................................

...................................................................................

.........................................................ಪಿನ್.......................

ಚಂದಾ ವಿವರ: (ನಿಮಗೆ ಸಂಬಂಧಿಸಿದ್ದನ್ನು ✓ ಮಾಡಿ)

| 1 ವರ್ಷದ ಚಂದಾ | 3 ವರ್ಷದ ಚಂದಾ | ಆಜೀವ ಚಂದಾ | ಪೋಷಕರ ಸಹಾಯಧನ |
|---|---|---|---|
| ₹ 140 | ₹ 375 | ₹ 3000 | ₹ 5000 |

ಹಣವನ್ನು ಮನಿ ಆರ್ಡರ್ / ಡ್ರಾಫ್ಟ್ (ಶ್ರೀರಾಮಕೃಷ್ಣ ಆಶ್ರಮ, ವಿವೇಕಪ್ರಭ A/c ಹೆಸರಿನಲ್ಲಿ) ಮೂಲಕ ಕಳುಹಿಸುತ್ತಿದ್ದೇನೆ.
ವಿವರ..........................................................................

1. ಹೊರ ಊರಿನ ಚೆಕ್‌ಗಳನ್ನು ಸ್ವೀಕರಿಸಲಾಗುವುದಿಲ್ಲ.
2. ವಿದೇಶಗಳಿಗೆ ಅನ್ವಯವಾಗುವ ಚಂದಾ ವಿವರಗಳಿಗೆ ಹಾಗೂ ಇತರ ವಿವರಗಳಿಗಾಗಿ ನಮಗೆ ಬರೆಯಿರಿ.

ಸಹಿ




# ಆಚರಣೆಗಳು

**ಬೆ**ಳಗಿನಿಂದಲೇ ಆರಂಭವಾಗುವ ನಮ್ಮ ಚಟುವಟಿಕೆಗಳ ನಡುವೆ ನಾವು ಎಷ್ಟೊಂದು ವಿಚಿತ್ರ ನಡುವಳಿಕೆಗಳನ್ನು ಗಮನಿಸುತ್ತೇವೆ! ಇನ್ನೂ ಹೊತ್ತು ಮೂಡಿಲ್ಲ, ಅಷ್ಟರಲ್ಲೇ ಅಂಗಳವನ್ನೆಲ್ಲ ಗುಡಿಸಿ, ಸಾರಿಸಿ, ರಂಗವಲ್ಲಿ ಹಾಕುತ್ತಾರೆ; ತುಳಸೀಕಟ್ಟೆಗೆ ಸುತ್ತು ಬರುತ್ತಾರೆ, ಮನೆಯೊಳಗಿಂದ (ಹಾಗೂ ಬೀದಿಯಲ್ಲಿರುವ ಗುಡಿಗಳಲ್ಲೂ ಸಹ) ಸುಪ್ರಭಾತಗಳು ಕೇಳಿಬರುತ್ತವೆ; ಮನೆಯಲ್ಲೇ ದೇವರ ಪಟಗಳಿಗೆ ಅಗರಬತ್ತಿ ಹಚ್ಚಿ ನಮಸ್ಕರಿಸುತ್ತಾರೆ. ಇನ್ನು ಮನೆಯ ಯಜಮಾನ ಎಲ್ಲರಿಗೂ ಕೇಳಿಸುವಂತೆ ಮಂತ್ರ ಹೇಳುತ್ತ ಸಂಧ್ಯಾವಂದನೆ, ಪೂಜೆ ಮಾಡುತ್ತಾನೆ. ಪರೀಕ್ಷೆಗೆ ಹೋಗುವ ವಿದ್ಯಾರ್ಥಿಗಳು ಸಮೀಪದ ದೇವರ ಗುಡಿಗೆ ಹೋಗಿ ಭಗವಂತನಲ್ಲಿ ಪ್ರಾರ್ಥನೆ ಸಲ್ಲಿಸುತ್ತಾರೆ. ಬಸ್ಸು, ರೈಲು, ಇನ್ನಿತರ ಗಾಡಿಗಳಲ್ಲಿ ಓಡಾಡುವ ಜನರಾದರೋ ದೇವಾಲಯ ಕಣ್ಣಿಗೆ ಬಿದ್ದಾಗಲೆಲ್ಲ ಒಂದು ನಮಸ್ಕಾರ ಸಲ್ಲಿಸುತ್ತಾರೆ. ನಾವು ದಿನನಿತ್ಯ ಧರ್ಮವನ್ನು ಕಂಡುಕೊಳ್ಳುವ ಪರಿ ಹೀಗೆ.

ಮನೆ, ಕುಟುಂಬ, ದೇವಸ್ಥಾನ, ಜಾತ್ರೆ, ಹಬ್ಬ ಹರಿದಿನಗಳಲ್ಲಿ ಧಾರ್ಮಿಕ ಆಚರಣೆ ಹಾಗೂ ವಿಧಿವಿಧಾನಗಳು ಇನ್ನಷ್ಟು ದಟ್ಟವಾಗಿ ಗೋಚರವಾಗುತ್ತವೆ. ಮನೆಮನೆಗಳಲ್ಲಿ ವ್ರತ, ಏಕಾದಶಿ, (ಅಥವಾ ಇನ್ನಿತರ) ಉಪವಾಸ, ಸತ್ಯನಾರಾಯಣ ಪೂಜೆ, ಸಹಸ್ರನಾಮ ಪಾರಾಯಣ, ದೀಪಾವಳಿ–ದಸರಾ ಮೊದಲಾದ ಹಬ್ಬಗಳು, ಕೊನೆಯಿಲ್ಲದ ಆಚರಣೆಗಳು ವರ್ಷದುದ್ದಕ್ಕೂ ನಡೆಯುತ್ತವೆ. ಪ್ರತಿದಿನವೂ ದೇಗುಲಗಳಲ್ಲಿ ಪೂಜೆ, ಪುನಸ್ಕಾರ, ಹರಕೆ, ಸೇವೆ, ವಿಧಿವಿಧಾನಗಳು ನಡೆಯುತ್ತಲೇ ಇರುತ್ತವೆ; ಜೊತೆಗೆ ವಿಶೇಷ ದಿನಗಳಲ್ಲಿ ವಿಶೇಷ ಆಚರಣೆಯ ವೈಭವ. ವಾರ್ಷಿಕವಾಗಿ ಜರುಗುವ ಉತ್ಸವಗಳಿಗೆ ಮೇರೆಯಿಲ್ಲ; ಎಷ್ಟು ಅದ್ದೂರಿಯಾಯಿತೋ, ಅಷ್ಟೂ ಆನಂದವೇ. ಇದರೊಂದಿಗೆ ತೀರ್ಥಯಾತ್ರೆಗೆ ಹೋಗುತ್ತೇವೆ; ನದಿ, ಸಾಗರಗಳಲ್ಲಿ ಸ್ನಾನ ಮಾಡಿ ಪುನೀತರಾಗುತ್ತೇವೆ. ಎಷ್ಟೇ ದಾರಿದ್ರ್ಯವಿರಲಿ, ಎಷ್ಟೇ ಹಣ ಖರ್ಚಾಗಲಿ, ಧಾರ್ಮಿಕ ಆಚರಣೆಗಳು ಅನಿವಾರ್ಯವಾಗಿ ನಡದೇ ತೀರುತ್ತವೆ.

ಅನೇಕ ಸಲ ಅನ್ನಿಸುತ್ತದೆ – ಈ ಆಚರಣೆಗಳಿಗೆ ಅರ್ಥವಿದೆಯೆ? ಇಷ್ಟೆಲ್ಲ ವಿಧಿ–ವಿಧಾನಗಳು ನಮ್ಮ ಜೀವನಕ್ಕೆ ನಿಜಕ್ಕೂ ಆವಶ್ಯಕವೆ? ಧಾರ್ಮಿಕ, ಆಧ್ಯಾತ್ಮಿಕ ಎಂದೆನಿಸಿಕೊಳ್ಳುವ ಈ ಎಲ್ಲ ನಡವಳಿಕೆಗಳು ವೈಜ್ಞಾನಿಕವಾಗಿ ಎಷ್ಟು ಸರಿ? ಇವುಗಳಿಂದ ನಮಗೆ ನಿಜವಾಗಿಯೂ ಪ್ರಯೋಜನವಿದೆಯೆ? ಸಾಕಷ್ಟು ಹಣ, ಶ್ರಮ ಅನಗತ್ಯವಾಗಿ ವ್ಯರ್ಥವಾಗುವುದಿಲ್ಲವೆ?

ನಂಬಿಕೆಯಿಲ್ಲದ, ನಿರೀಶ್ವರವಾದಿಗಳಾದ ವ್ಯಕ್ತಿಗಳ ವಿಷಯ ಹಾಗಿರಲಿ, ನಮ್ಮಲ್ಲೇ ಈ ಬಗೆಯ ಪ್ರಶ್ನೆ ಮೂಡುವಾಗ, ಇವುಗಳ ಹಿಂದೆ ಏನು ಅರ್ಥವಿದೆ ಎಂಬುದನ್ನು ನಾವು ಎಂದಾದರೊಮ್ಮೆ ಕಂಡುಕೊಳ್ಳಲೇಬೇಕು. ಖಚಿತವಾದ ನಿಲುವಿಲ್ಲದೆ 'ಪ್ರವಾಹ ಪತಿತ'ರಾಗಿ ಇಂಥ ಆಚರಣೆಗಳನ್ನು ಮಾಡುವುದಕ್ಕಿಂತ, ಸ್ಪಷ್ಟವಾದ ಅರಿವಿನೊಂದಿಗೆ ಎಷ್ಟು ಬೇಕೋ ಅಷ್ಟನ್ನು ಮಾಡುವುದು ಉತ್ತಮವೆನಿಸುತ್ತದೆ. ಅಂತೆಯೇ, ಆಚರಣೆಗಳ ಹಿಂದಿರುವ ಅರ್ಥವನ್ನು ಅರಸುತ್ತ ಹೋಗುವುದರಲ್ಲಿ ನಮ್ಮ ಧರ್ಮ, ಸಂಸ್ಕೃತಿಯ ಅರ್ಥವನ್ನೇ ಅರಿತಂತಾಗುತ್ತದೆ.

**ಆಚರಣೆಗಳ ಹಿಂದಿನ ತತ್ತ್ವ :** 'ಪ್ರತಿಯೊಂದು ದೊಡ್ಡ ಧರ್ಮದಲ್ಲಿಯೂ ಮೂರುಭಾಗಗಳಿವೆ. ಮೊದಲು ತತ್ತ್ವ. ಇದರಲ್ಲಿ ಅದರ ಮೂಲತತ್ತ್ವದ ಗುರಿಯನ್ನು ಮತ್ತು ಅದನ್ನು ಸಾಧಿಸುವ ಬಗೆಯನ್ನು ವಿವರಿಸುವರು. ಎರಡನೆಯದು ಪುರಾಣಗಳು– ಇಲ್ಲಿ ತತ್ತ್ವವನ್ನು ಸ್ಥೂಲರೂಪಕ್ಕೆ ಇಳಿಸಿರುವರು. ಪುರಾಣಗಳಲ್ಲಿ ದೇವತೆಗಳಿಗೂ ಮಾನವರಿಗೂ ಸಂಬಂಧಪಟ್ಟ ಕಥೆ ಇತ್ಯಾದಿಗಳಿವೆ. ಕಾಲ್ಪನಿಕ ಮಾನವ ಮತ್ತು ದೇವತೆಗಳ ಮೂಲಕ ತತ್ತ್ವವನ್ನು ವಿವರಿಸಿರುವರು. ಮೂರನೆಯದು ಕ್ರಿಯಾವಿಧಿ. ಇದು ಮತ್ತೂ ಸ್ಥೂಲವಾಗಿದೆ. ಇದರಲ್ಲಿ ಹಲವು ಕ್ರಿಯೆಗಳು, ಅಂಗನ್ಯಾಸ, ಕರನ್ಯಾಸ, ಇಂದ್ರಿಯಗಳಿಗೆ ಪ್ರಿಯವಾದ ಹೂವು ಗಂಧ ಮುಂತಾದುವು ಇವೆ. ಎಲ್ಲ ಪ್ರಖ್ಯಾತ ಧರ್ಮಗಳಲ್ಲೂ ಇವು ಮೂರು ಇವೆ' ಎನ್ನುತ್ತಾರೆ ಸ್ವಾಮೀಜಿ *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂಪುಟ ೨, ಪು. ೨೧೯).* ಸಮಾಜದಲ್ಲಿ ಧರ್ಮವು ಗೋಚರವಾಗುವುದು ಆಚರಣೆ, ವಿಧಿವಿಧಾನಗಳ ರೂಪದಲ್ಲಿ – ತೀರ ಕೆಳಮಟ್ಟದ ಪೂಜೆ, ಪುನಸ್ಕಾರ, ನಂಬಿಕೆಗಳಿಂದ ಹಿಡಿದು ಆತ್ಮಸಾಕ್ಷಾತ್ಕಾರದವರೆಗೂ ಇಂತಹ ಆಚರಣೆಗಳಿಗೆ ಮಹತ್ವವಿದೆ. ಉದಾಹರಣೆಗೆ,

ನಮಸ್ಕರಿಸುವ ಪದ್ಧತಿ. ಹಿಂದೂಧರ್ಮದಲ್ಲಷ್ಟೇ ಅಲ್ಲ, ಬೌದ್ಧ, ಜೈನ, ಸಿಖ್ ಮುಂತಾದ ಪೌರ್ವಾತ್ಯ ಧರ್ಮಗಳಲ್ಲೂ ನಮಸ್ಕರಿಸುವುದು ಒಂದು ಪ್ರಧಾನ ಆಚರಣೆ. (ಇಸ್ಲಾಂ, ಕ್ರೈಸ್ತ ಧರ್ಮಗಳಲ್ಲಿ ಕೂಡ ಈ ವಿಧಿಯು ವಿಭಿನ್ನ ರೀತಿಯಲ್ಲಿ, ಬೇರೆ ಅರ್ಥಗಳಲ್ಲಿ ಆಚರಿಸಲ್ಪಡುತ್ತದೆ.) ಗುರುಹಿರಿಯರಿಗೆ, ಹೆತ್ತವರಿಗೆ, ಮಹಾತ್ಮರಿಗೆ ನಮಸ್ಕರಿಸುವ ಪದ್ಧತಿ ನಮ್ಮಲ್ಲಿ ಅತ್ಯಂತ ಸ್ವಾಭಾವಿಕವಾಗಿ ಕಂಡು ಬರುವ ಒಂದು ನಡವಳಿಕೆ. ಇದರೊಂದಿಗೆ ದೇವರಿಗೆ, ದೇವರ ಪ್ರತೀಕವಾದ ವಿಗ್ರಹಕ್ಕೆ, ಅಷ್ಟೇ ಅಲ್ಲ – ದೇವರ ಅಥವಾ ದೈವಿಕತೆಯ ಸ್ಪರ್ಶವಿರುವ ನದಿ, ಪರ್ವತ, ಕಟ್ಟಡ, ಮರ, ಗಿಡ ಇತ್ಯಾದಿಗಳಿಗೂ ನಮಸ್ಕರಿಸಿ ಆರಾಧಿಸುವುದನ್ನು ನಾವು ಎಲ್ಲೆಡೆ ಕಾಣುತ್ತೇವೆ. ಹಳ್ಳಿಯ ಸರಳ ರೈತರಿಂದ ಹಿಡಿದು, ಅತ್ಯಾಧುನಿಕ ವಿಜ್ಞಾನ-ತಂತ್ರಜ್ಞಾನ ವಿದ್ಯಾಭ್ಯಾಸ ಪಡೆದವರೂ ಹೀಗೆ ಮಾಡುತ್ತಾರೆ. ತನಗಿಂತ ಮಿಗಿಲಾದ ವ್ಯಕ್ತಿ ಅಥವಾ ಶಕ್ತಿಯ ಮುಂದೆ ತಲೆಬಾಗಿ ವಂದಿಸುವ ಮೂಲಕ ಅಂತಹ ವ್ಯಕ್ತಿಯ, ಶಕ್ತಿಯ ಅನುಗ್ರಹ, ಆಶೀರ್ವಾದ ಅಥವಾ ಕೃಪೆ ತನಗೂ ಲಭಿಸುತ್ತದೆ ಎಂಬ ನಂಬಿಕೆಯೇ ಈ ಎಲ್ಲ ಆಚರಣೆಗಳ ಮೂಲ. ಅನೇಕ ಜನರಿಗೆ ಈ ಭಾವನೆ ತಿಳಿಯದೆ, ಹಿರಿಯರ ಒತ್ತಡಕ್ಕೆ ಒಳಗಾಗಿಯೋ, 'ಎಲ್ಲರೂ ಮಾಡುತ್ತಾರೆ, ಹಾಗಾಗಿ ನಾನೂ ಮಾಡುತ್ತೇನೆ' ಎಂಬ ಯಾಂತ್ರಿಕ ಅನುಕರಣೆಯಿಂದಲೋ ಅವರು ಇದನ್ನು ಮಾಡಬಹುದು. ಆದರೆ ಜೀವನದ ಯಾವುದೋ ಒಂದು ಹಂತದಲ್ಲಾದರೂ ಈ ಆಚರಣೆಯ ಹಿಂದಿನ ಭಾವ ಅವರಿಗೆ ಅರ್ಥವಾಗುವ ಸಂಭವವಿದೆ; ಆಗಬೇಕು ಕೂಡ. ಒಂದು ವೇಳೆ ಅರಿವಿಲ್ಲದೆ, ಯಾಂತ್ರಿಕವಾಗಿ ಮಾಡಿದರೂ ಅದರಿಂದ ಲಾಭವಿದೆ ಎಂದೂ ಹೇಳುವವರಿದ್ದಾರೆ. ಹೀಗೆ ತೀರ ಸಾಮಾನ್ಯವೆನಿಸುವ ಈ ನಡವಳಿಕೆಯು ಉನ್ನತ ಹಂತದ ಆಧ್ಯಾತ್ಮಿಕ ಅರ್ಥದಲ್ಲಿ ಅತ್ಯಂತ ಪ್ರಮುಖವಾದ ಒಂದು ಮೌಲ್ಯವಾಗಿಯೂ ಅರ್ಥ ಪಡೆದುಕೊಳ್ಳುತ್ತದೆ. ವೈಯಕ್ತಿಕ ಶಕ್ತಿ-ಸಾಮರ್ಥ್ಯದ ಮಿತಿಯನ್ನರಿತ ಸಾಧಕನು ಪರಾತ್ಪರವೂ ಅಗೋಚರವೂ ಆದ ಶಕ್ತಿಯ ಅಸಾಧಾರಣ ಮಹಿಮೆಯ ಮುಂದೆ ತಲೆಬಾಗಿ ನಮಸ್ಕರಿಸುವುದರಲ್ಲಿ ವಿಶೇಷ ಆಧ್ಯಾತ್ಮಿಕ ಭಾವವಿದೆ. ಭಗವಂತನನ್ನು ಅರಿಯಲು, ಅವನಿಂದ ಶಕ್ತಿಯನ್ನು ಪಡೆಯಲು ಸ್ವತಃ ಅವನೇ ಇಚ್ಛೆಪಟ್ಟು ನೀಡಿದ ಹೊರತು ಬೇರೆ ದಾರಿಯಿಲ್ಲ. ಹೀಗೆ ನೀಡುವ ವಿಶೇಷ ಶಕ್ತಿಗೆ 'ಕೃಪೆ' ಎಂದು ಹೆಸರು. ಹೀಗೆ ಕೃಪೆ ಹರಿದು ಬರಬೇಕಾದರೆ ಭಗವಂತನಲ್ಲಿ ಶರಣಾಗತನಾಗುವುದಲ್ಲದೆ ಬೇರೆ ಮಾರ್ಗವಿಲ್ಲ. ಎಲ್ಲಿ ಭಗವತ್ಕೃಪೆ ಹರಿದು ಬರುವುದೋ, ಅಲ್ಲಿ ಭಗವಂತ ಗುರುವಾಗುತ್ತಾನೆ; ಅವನ ಪ್ರತಿರೂಪವೇ ದೇಹಧಾರಿಯಾದ ಜೀವಂತ ಗುರು. ಗುರು ಭಗವಂತನನ್ನು ತೋರಿಸಿಕೊಡುವುದರಿಂದ, ಕೊನೆಗೆ ಅವನೂ ಭಗವಂತನಲ್ಲಿ ಒಂದಾಗುವುದರಿಂದ ಗುರುವನ್ನು ಪೂಜಿಸಬೇಕು, ನಮಸ್ಕರಿಸಬೇಕು. ಹೀಗೆ ಭಕ್ತಿಮಾರ್ಗದಲ್ಲೂ, ಜ್ಞಾನಮಾರ್ಗದಲ್ಲೂ, ಇತರ ಮಾರ್ಗಗಳಲ್ಲೂ ನಮಸ್ಕರಿಸುವ ವಿಧಿ ಮುಖ್ಯವಾಗುತ್ತದೆ. ಜೀವ-ಬ್ರಹ್ಮಗಳ ಐಕ್ಯವನ್ನು ಪ್ರತಿಪಾದಿಸುವ ಅದ್ವೈತ ದರ್ಶನದಲ್ಲೂ ಗುರುವಂದನೆ, ನಮಸ್ಕರಿಸುವ ವಿಧಿ ಮಹತ್ವ ಪಡೆಯುತ್ತದೆ. ಎಲ್ಲಿಯತನಕ ಅದ್ವಯ ತತ್ತ್ವದಲ್ಲಿ ಜೀವಿಯು ಪ್ರತಿಷ್ಠಿತನಾಗಿಲ್ಲವೋ, ಅಲ್ಲಿವರೆಗೂ ಅವನು 'ಬ್ರಹ್ಮ'ಕ್ಕೆ ಮಣಿಯಬೇಕು. ನಮಸ್ಕರಿಸುವುದರಿಂದ ಸಾಧಕನ ಅಹಂಕಾರ ತಗ್ಗಿ, ವಿನೀತಭಾವ ಹೆಚ್ಚುತ್ತದೆ. ಜ್ಞಾನ, ಭಕ್ತಿ, ಕೃಪೆ, ಆಶೀರ್ವಾದಗಳು ಹರಿದು ಬರಲು ಅವನ ಹೃದಯ ತೆರೆಯುತ್ತದೆ. ಇದರಿಂದ ಸಾಧಕನು ತನ್ನ ಪಥದಲ್ಲಿ ಮುಂದುವರಿಯಲು ಅತ್ಯಗತ್ಯವಾಗಿ ಬೇಕಾದ ಮನಸ್ಥಿತಿ ಲಭ್ಯವಾಗುತ್ತದೆ.

ಈ ರೀತಿ ಉಳಿದೆಲ್ಲ ವಿಧಿವಿಧಾನಗಳ ಹಿಂದೆ ಆಳವಾದ ಅರ್ಥವಿದೆ. ಅಂಧವಾಗಿ ಆಚರಣೆ ಮಾಡುವವರು, ಧಾರ್ಮಿಕ ಆಚರಣೆಗಳ ಕೆಳಗಿನ ಹಂತದಲ್ಲೇ ಇರುವವರು, ಇನ್ನೂ ಅಪ್ರಬುದ್ಧಾವಸ್ಥೆಯಲ್ಲಿರುವ ಮಕ್ಕಳು – ಹೀಗೆ ಎಲ್ಲರೂ ಒಂದೊಂದು ಆಚರಣೆಗಳನ್ನು ಅರಿವಿಲ್ಲದೆ ಮಾಡುತ್ತಾರೆ; ಅವುಗಳನ್ನು ಅರಿತು ಆಚರಿಸುವವರೂ ಹಲವರಿರುತ್ತಾರೆ. ಒಬ್ಬೊಬ್ಬರಿಗೆ ಈ ಆಚರಣೆಗಳು ಒಂದೊಂದು ಬಗೆಯಲ್ಲಿ ಅರ್ಥವಾಗುತ್ತದೆ, ಅವರ ಬೆಳವಣಿಗೆಗೆ ಅನುಸಾರವಾಗಿ ಈ ಅರ್ಥೈಸುವಿಕೆ ವಿಕಾಸವಾಗುತ್ತ ಹೋಗುತ್ತದೆ. ಆದರೆ, ಆಚರಣೆ, ವಿಧಿಗಳ ಹಿಂದಿನ ಅರ್ಥವನ್ನು ಪ್ರಯತ್ನಪೂರ್ವಕವಾಗಿ ಅರಿತುಕೊಂಡು, ಆ ಭಾವದಲ್ಲೇ ಅದನ್ನು ಆಚರಿಸುವುದರಿಂದ ವಿಶೇಷ ಲಾಭವಿದೆ. ಆಗ 'ಚಿತ್ತವಿಲ್ಲದೆ ಗುಡಿಯ ಸುತ್ತಿದರೆ ಫಲವೇನು?' ಎಂಬ ಮಾತಿನ ಅರ್ಥ ಸ್ಪಷ್ಟವಾಗುವುದು. 'ಗುಡಿಯೊಳಗಿರುವ ಮೂರ್ತಿಯ ಮೂಲಕ ವ್ಯಕ್ತವಾಗುವ ಭಗವಂತನಲ್ಲಿ ಚಿತ್ತವನ್ನಿಟ್ಟು ಪ್ರದಕ್ಷಿಣೆ ಬರಬೇಕು' ಎಂಬ ಭಾವವೇ ಮುಖ್ಯವಾಗುವುದಲ್ಲದೆ, 'ಫಲವೇ ಇಲ್ಲದ ಮೇಲೆ ಸುತ್ತು ಬರುವ ಕೆಲಸವೇ ಬೇಡ' ಎಂಬ ಅಸಡ್ಡೆಯ ಭಾವ ಬರಲಾರದು. ಮಹಾತ್ಮರು ವಿಧಿ, ಆಚರಣೆಗಳನ್ನು ಖಂಡಿಸಿರುವುದು ಅವು ಅರ್ಥಹೀನವೆಂದಲ್ಲ; ಅವುಗಳ ಹಿಂದಿನ ಅರ್ಥವನ್ನರಿತು ಅವುಗಳನ್ನು ಆಚರಿಸಬೇಕು ಎಂದು ಮಾತ್ರ.

**ಆಚರಣೆಗಳ ಮಾನಸಿಕ ಲಾಭ:** ರಾಜು ಎಂಬ ಒಬ್ಬ ವಿದ್ಯಾರ್ಥಿ ಪ್ರತಿದಿನ ಬೆಳಿಗ್ಗೆ ಶಾಲೆಗೆ ಹೋಗುವ ಮೊದಲು ತನ್ನ ಮನೆಯ ಸಮೀಪವೇ ಇದ್ದ ಒಂದು ದೇವಾಲಯಕ್ಕೆ ಹೋಗಿ, ಪ್ರದಕ್ಷಿಣೆ ಬಂದು, ನಮಸ್ಕರಿಸಿ, ಪ್ರಸಾದ ಸ್ವೀಕರಿಸಿ, ಅನಂತರ ಶಾಲೆಗೆ ಹೋಗುತ್ತಿದ್ದ. ಅವನ ಗೆಳೆಯನಿಗೆ ಇದೊಂದು ವಿಚಿತ್ರ; ದೇವರನ್ನು ನಂಬದ ಅವನು ಈತನನ್ನು ಟೀಕಿಸುತ್ತಿದ್ದ, ಅನೇಕ ರೀತಿಯಲ್ಲಿ ವಾದಿಸಿ ಅವನ ಶ್ರದ್ಧೆಯನ್ನೇ ಬುಡಮೇಲು ಮಾಡಲು ಯತ್ನಿಸುತ್ತಿದ್ದ. ಒಂದು ದಿನ ಅವನು ಸವಾಲು ಹಾಕಿದ – 'ದಿನಾ ದೇವಸ್ಥಾನಕ್ಕೆ ಹೋಗುತ್ತೀಯಲ್ಲ, ಅದರಿಂದ ಏನಾಗುತ್ತದೆ? ನಾಳೆ ನೀನು ದೇವಸ್ಥಾನಕ್ಕೆ ಹೋಗದೆ ಶಾಲೆಗೆ ಬಾ. ನಿನಗೆ ಪಾಠ ಎಂದಿನಂತೆಯೇ ಅರ್ಥವಾಗುತ್ತದೆ, ಕೆಲವು ನಿಮಿಷ ಉಳಿತಾಯವೂ ಆಗುತ್ತದೆ. ಅಷ್ಟು ಹೊತ್ತನ್ನು ಓದಲು ಉಪಯೋಗಿಸಬಹುದಲ್ಲ?' ಎಂದ. ಅಂತೆಯೇ ರಾಜು ಇಂದು ದೇವಾಲಯಕ್ಕೆ ಹೋಗದೆ

ಶಾಲೆಗೆ ಹೋದ; ಎಂದಿನಂತೆ ಕ್ಲಾಸಿನಲ್ಲಿ ಕುಳಿತ. ಮರಳಿ ಬರುವಾಗ ಸ್ನೇಹಿತ ಕೇಳಿದ, 'ಇಂದು ದೇವಾಲಯಕ್ಕೆ ಹೋಗಿಲ್ಲ ಎಂದೆಯಲ್ಲ, ಏನಾಯಿತು ನೋಡು? ಪಾಠ ಎಂದಿಗಿಂತ ಹೆಚ್ಚು ಅರ್ಥವಾಗಿರಬೇಕು, ಅಲ್ಲವೆ?' ಅದಕ್ಕೆ ರಾಜು, 'ಪಾಠವೇನೋ ಅರ್ಥವಾಯಿತು, ಯಾವ ತೊಂದರೆಯೂ ಆಗಲಿಲ್ಲ. ನೀನು ಹೇಳಿದಂತೆ ಹತ್ತು ನಿಮಿಷ ಉಳಿತಾಯವೂ ಆಯಿತು. ಆದರೂ ನನಗೆ ಏನನ್ನೋ ಕಳೆದುಕೊಂಡ ಹಾಗಾಗುತ್ತಿತ್ತು. ದೇವಾಲಯಕ್ಕೆ ಹೋಗಿ ಬಂದ ನಂತರ ಶಾಂತಿ, ನೆಮ್ಮದಿ, ಧನ್ಯತಾಭಾವ ಉಂಟಾಗುತ್ತಿತ್ತು. ಇಂದು ಹಾಗೆ ಕಳೆದುಕೊಂಡ ಭಾವನೆ ಇಡೀದಿನ ನನ್ನನ್ನು ಕಾಡುತ್ತಿತ್ತು. ನಾಳೆ ತಪ್ಪದೆ ದೇವಾಲಯಕ್ಕೆ ಹೋಗಿ, ಇಂದಿನ ಸಲುವಾಗಿ ಇನ್ನಷ್ಟು ಪ್ರಾರ್ಥಿಸಿ ಬರುತ್ತೇನೆ' ಎಂದ.

ಇದು ನಿಯಮಿತವಾಗಿ ಮಾಡುವ ಆಚರಣೆಗಳ ಲಾಭ. ಪ್ರತಿದಿನವೂ ನಾವು ಮಾಡುವ ಆಚರಣೆಗಳಲ್ಲಿ ಪೂರ್ಣ ಮನಸ್ಸನ್ನು ಇಡಲಾಗುವುದಿಲ್ಲ; ಅದಕ್ಕೆ ನಮ್ಮ ಮನಸ್ಸಿನ ಏರುಪೇರುಗಳು, ಆ ಕ್ಷಣದ ಹಾಗೂ ಪರಿಸ್ಥಿತಿಯ ಒತ್ತಡವೇ ಕಾರಣವಾಗಿರಬಹುದು. ಆದರೂ ಪ್ರತಿದಿನ ಮಾಡುವ ಆಚರಣೆಯಿಂದ ನಮ್ಮ ಮನಸ್ಸು ತೃಪ್ತಿಹೊಂದುತ್ತದೆ, ಪ್ರಫುಲ್ಲವಾಗುತ್ತದೆ. 'ನಿತ್ಯಕರ್ಮ'ವೆಂದು ಶಾಸ್ತ್ರಗ್ರಂಥಗಳಲ್ಲಿ ಕರೆದಿರುವ ಕೆಲವೊಂದು ವಿಧಿಗಳ ಪ್ರಯೋಜನ ಇದೇ. ನಮ್ಮ ಮನಸ್ಸಿನ ಸ್ಥಿತಿಗತಿ ನಮ್ಮ ಕ್ರಿಯೆಯನ್ನು, ನಮ್ಮ ಜೀವನವನ್ನು ರೂಪಿಸುವುದರಿಂದ, ಆಚರಣೆಗಳನ್ನು ಕುರುಡಾಗಿ ಮಾಡಿದರೂ ಅದರಿಂದ ಲಾಭವಿದೆ. ಮೇಲೆ ಹೇಳಿದ ರಾಜುವಿನಂತೆ ಆಚರಣೆಯ ಲಾಭವನ್ನು ಅರಿತುಕೊಂಡರೂ ಸಾಕು, ಅದೇ ಜೀವನದಲ್ಲಿ ಪ್ರೇರಕ ಶಕ್ತಿಯಾಗುವುದು. ಇನ್ನಷ್ಟು ಆಳಕ್ಕಿಳಿದು ಆಚರಣೆಗಳ ಆಧ್ಯಾತ್ಮಿಕ ಆಯಾಮವನ್ನು ಅರಿತುಕೊಳ್ಳುವುದರಿಂದ, ಅವುಗಳು ನಮ್ಮ ಜೀವನದ ಲೌಕಿಕ ಕ್ರಿಯೆಗಳನ್ನು ಆಧ್ಯಾತ್ಮಿಕ ಹಂತಕ್ಕೇರಿಸುವುದು. ಇದು ಆಚರಣೆಗಳಿಂದಾಗಬಹುದಾದ ವಿಶೇಷ ಪ್ರಯೋಜನ.

**ಆಧ್ಯಾತ್ಮಿಕ ದೃಷ್ಟಿಯಲ್ಲಿ:** ಧರ್ಮದ ತಿರುಳು ಇರುವುದೇ ಅನುಭವದಲ್ಲಿ, ಭಗವಂತನನ್ನು ಸಾಕ್ಷಾತ್ತಾಗಿ ಕಾಣುವುದು, ಅವನ ನಿಜವಾದ ಸ್ವರೂಪವನ್ನು ಅನುಭವಿಸುವುದೇ ನಿಜವಾದ ಸಾಕ್ಷಾತ್ಕಾರ. ಇದಕ್ಕೆ ಸಾಧಕನು ಒಂದೆರಡು ದಿನ, ಕೆಲವೊಂದು ವರ್ಷ ಪ್ರಯತ್ನಪಟ್ಟರೆ ಸಾಕಾಗುವುದಿಲ್ಲ. ತನ್ನ ಇಡೀ ಜೀವನವನ್ನು ಒಂದು ಗುರಿಯತ್ತ ಮುನ್ನಡೆಸುವ ವಿಶೇಷ ಸಾಧನೆ ಅದು. ಎಷ್ಟು ದೀರ್ಘಕಾಲವಾದರೂ ಮುಂದುವರಿಯುವ, ಎಷ್ಟು ಸೋಲುಗಳೇ ಆದರೂ ಮತ್ತೆ ಪ್ರಯತ್ನಪಡುವ ವಿಶೇಷ ತಾಳ್ಮೆ, ಛಲ, ಸತತ ಶ್ರಮ ಅವನಿಗೆ ಇರಬೇಕು. ಈ ರೀತಿಯ ಸಾಧನೆಗೆ ಅತ್ಯಗತ್ಯವಾದ ಮನಃಸ್ಥಿತಿಯನ್ನು ಗಳಿಸಿಕೊಳ್ಳಲು ಮನೋನಿಗ್ರಹ, ಆತ್ಮಸಂಯಮ ಅತ್ಯಂತ ಮುಖ್ಯ. ಆಚರಣೆ, ವಿಧಿವಿಧಾನಗಳು ಇಂಥ ಶಿಸ್ತುಗಳನ್ನು ಗಳಿಸಲು ಸಹಾಯ ಮಾಡುತ್ತವೆ. ಇಂದ್ರಿಯಭೋಗದ ಕಡೆಗೆ, ಅಶಿಸ್ತಿನ ಕಡೆಗೆ, ಉದಾಸೀನಭಾವದ ಕಡೆಗೆ ವಾಲುವುದೇ ಮನಸ್ಸಿನ ಸಹಜ ಪ್ರವೃತ್ತಿ. ಅದನ್ನು ಪಳಗಿಸಿ, ನಿಯಂತ್ರಣದ ಮೂಲಕ ಮತ್ತೆ ಮತ್ತೆ ಉನ್ನತ ಭಾವಗಳತ್ತ ಹರಿಯಬಿಡಲು ನಿಯಮಿತವಾದ, ಕ್ರಮಬದ್ಧವಾದ ಜೀವನ ಆರಂಭದಲ್ಲಿ ಅತ್ಯಗತ್ಯ. ಧರ್ಮದಲ್ಲಿ ಕಂಡುಬರುವ ಆಚರಣೆಗಳೆಲ್ಲ ಇಂತಹ ಶಿಸ್ತುಬದ್ಧತೆಯನ್ನು ಬಿಗಿಗೊಳಿಸಲು, ಶ್ರದ್ಧೆಯನ್ನು ಬಲಪಡಿಸಲು ಸಹಾಯ ಮಾಡುತ್ತವೆ. ಆಧ್ಯಾತ್ಮಿಕ ಸಾಧನೆಯ ಮೊದಲ ಹಂತದಲ್ಲಿ ಇವು ವಿಶೇಷ ಮಹತ್ವವನ್ನು ಹೊಂದಿವೆ. ಮನಸ್ಸು ಉನ್ನತ ಹಂತವನ್ನು ಏರಿದ ಬಳಿಕ ಇಂಥ ಆಚರಣೆಗಳು ಅನಗತ್ಯ ಎಂದು ಶ್ರೀರಾಮಕೃಷ್ಣರು ಹೇಳುತ್ತಾರೆ: ''ಯಾವಾಗ ನಿಮಗೆ ಹರಿನಾಮವನ್ನೋ, ರಾಮನಾಮವನ್ನೋ ಒಮ್ಮೆ ಉಚ್ಚರಿಸಿದ ಮಾತ್ರದಿಂದಲೇ ರೋಮಾಂಚನವಾಗುವುದೋ, ಪ್ರೇಮಾಶ್ರು ಸುರಿಯುವುದೋ ಆಗ ನಿಜವಾಗಿ ತಿಳಿದುಕೊಳ್ಳಿ, ಇನ್ನು ನೀವು ಸಂಧ್ಯಾದಿ ಕರ್ಮಗಳನ್ನು ಮಾಡಬೇಕಾಗಿಲ್ಲ ಎಂದು. ಆಗ ಮಾತ್ರವೇ ನಿಮಗೆ ಕರ್ಮತ್ಯಾಗದ ಅಧಿಕಾರ – ಕರ್ಮ ತನಗೆ ತಾನೇ ನಿಮ್ಮನ್ನು ಬಿಟ್ಟು ತೊಲಗಿ ಹೋಗುತ್ತದೆ.'' *(ಶ್ರೀರಾಮಕೃಷ್ಣ ವಚನ ವೇದ, ಭಾಗ ೧, ಪು.೧)* ಆದರೆ, ಉನ್ನತ ಹಂತದಲ್ಲಿ ಮನಸ್ಸನ್ನು ಸದಾ ಇರಿಸಲು ಅಂಥ ಆಚರಣೆಗಳನ್ನು ಯಾವಾಗಲೂ ಪಾಲಿಸಬೇಕು ಎಂದೂ ಹೇಳಲಾಗಿದೆ. ತೋತಾಪುರಿಯ ಮಾತಿನಂತೆ ಕಮಂಡಲುವನ್ನು ಪ್ರತಿದಿನವೂ ತೊಳೆಯಬೇಕು, ಆಗಮಾತ್ರ ಅದು ತೊಳಗಿ ಬೆಳಗುತ್ತಿರುತ್ತದೆ, ಅಂತೆಯೇ ಮನಸ್ಸನ್ನು ಉನ್ನತಾವಸ್ಥೆಯಲ್ಲಿರಿಸಲು ಪ್ರತಿದಿನವೂ ಸಾಧನೆ ಮಾಡಬೇಕು. ಶ್ರೀರಾಮಕೃಷ್ಣರು ಹೇಳುತ್ತಾರೆ, 'ಕಮಂಡಲು ಚಿನ್ನದ್ದಾದರೆ ಅದನ್ನು ಪ್ರತಿದಿನ ತೊಳೆಯದಿದ್ದರೂ ಹಾನಿಯಿಲ್ಲ' – ಅಂದರೆ ಗುರಿ ಮುಟ್ಟಿದ ಬಳಿಕ ವಿಧಿ, ಆಚರಣೆಗಳ ಬಗ್ಗೆ ಅಷ್ಟಾಗಿ ಗಮನ ಕೊಡಬೇಕಾಗಿಲ್ಲ. ಆದರೆ ಆಧ್ಯಾತ್ಮಿಕ ಸಾಧನೆಗಳ ಮೂಲಕ ಗುರಿ ತಲುಪಿದ ಮಹಾತ್ಮರು ಆಚರಣೆಗಳನ್ನು ಬಿಟ್ಟುಬಿಟ್ಟಿದ್ದರೆ, ಅದು ಅವರಿಗೆ ಮಾತ್ರ ಅನ್ವಯವಾಗುವುದಲ್ಲದೆ, ಇನ್ನೂ ಆರಂಭಿಕ ಹಂತಗಳಲ್ಲೇ ಇರುವವರು ಈ ಮಹಾತ್ಮರಂತೆ ಆಚರಣೆಗಳನ್ನು ಬಿಡಬಾರದು ಎಂಬುದು ಮುಖ್ಯ. 'ಮುಕ್ತಿ ಪಡೆದವನ ಕರ್ಮಗಳು ತಾವಾಗಿಯೇ ಬಿದ್ದು ಹೋಗುವುವು' ಎನ್ನುತ್ತಾರೆ ಶ್ರೀರಾಮಕೃಷ್ಣರು.

ಆಚರಣೆಗಳಲ್ಲಿ ಅನೇಕ ಅನಾಚಾರಗಳೂ, ಅರ್ಥವಿಲ್ಲದ ನಡವಳಿಕೆಗಳೂ ಸೇರಿಕೊಂಡಿರುವುದೂ ವಾಸ್ತವ. ಹಲವು ಬಾರಿ ಅವು ವಿನಾಶಕಾರಿಯಾದ ಪರಿಣಾಮವನ್ನು ಉಂಟುಮಾಡಿ, ಧರ್ಮದ ಉನ್ನತ, ವಿಶಾಲ ಭಾವನೆಗಳಿಗೆ ವಿರುದ್ಧವಾದ ಕೆಲಸವನ್ನೇ ಮಾಡಿವೆ. ಉದಾಹರಣೆಗೆ – ಅಸ್ಪೃಶ್ಯತೆ, ವಾಮಾಚಾರ, ಮತಾಂಧತೆ ಇತ್ಯಾದಿ. ಪ್ರತಿಯೊಬ್ಬರೂ ತಮ್ಮ ತಮ್ಮ ವಿವೇಚನೆ, ತಿಳುವಳಿಕೆಗಳಿಂದ ಈ ಕೆಡುಕುಗಳನ್ನು ಮೀರಿ ನಿಲ್ಲಬೇಕು; ಧರ್ಮದ ನಿಜವಾದ ಅರ್ಥವನ್ನು ಅರಿತುಕೊಳ್ಳಬೇಕು. ಇದೇ ನಿಜವಾದ ಧರ್ಮಸಂರಕ್ಷಣೆಯಾಗುತ್ತದೆ. ✳

# ಅಂತರ್ಯಾಮಿ



❁ ಆತ ಅಂತರ್ಯಾಮಿ. ಆತನಿಗೆ ಸರಳ ಮನಸ್ಸಿನಿಂದ, ಶುದ್ಧ ಮನಸ್ಸಿನಿಂದ ಪ್ರಾರ್ಥನೆ ಸಲ್ಲಿಸು. ಆತ ಎಲ್ಲವನ್ನೂ ತಿಳಿಸಿಕೊಡುತ್ತಾನೆ, ಅಹಂಕಾರ ತ್ಯಜಿಸಿ ಅವನಲ್ಲಿ ಶರಣಾಗತನಾಗು; ಎಲ್ಲಾ ದೊರೆಯುತ್ತದೆ.

❁ ಭಗವಂತ ವಿಭುರೂಪದಿಂದ ನಿಸ್ಸಂದೇಹವಾಗಿ ಸರ್ವಭೂತಗಳಲ್ಲಿಯೂ ಇದ್ದಾನೆ. ಆದರೆ ಶಕ್ತಿವಿಶೇಷತೆಯಿಂದ ಕೆಲವೆಡೆ ವಿದ್ಯಾಶಕ್ತಿ ರೂಪದಲ್ಲಿ, ಕೆಲವೆಡೆ ಅವಿದ್ಯಾಶಕ್ತಿ ರೂಪದಲ್ಲಿ. ಕೆಲವೆಡೆ ಹೆಚ್ಚು ಶಕ್ತಿಯಿಂದ, ಇನ್ನು ಕೆಲವೆಡೆ ಕಡಮೆ ಶಕ್ತಿಯಿಂದ ವ್ಯಕ್ತವಾಗಿದ್ದಾನೆ. ಕಾಣುವುದಿಲ್ಲವೆ, ಮನುಷ್ಯರಲ್ಲಿ ಮೋಸಗಾರರು, ದಗಾಖೋರರು, ಅಲ್ಲದೆ ಹುಲಿಯಂಥ ಕ್ರೂರಿಗಳೂ ಇರುವುದನ್ನು? ನಾನು ಅವರನ್ನು ಕರೆಯುತ್ತೇನೆ, 'ಮೋಸಗಾರ ಭಗವಂತ', 'ವ್ಯಾಘ್ರ ಭಗವಂತ' ಅಂತ.

❁ ಭಗವತಿ ನನಗೆ ಕಾಳೀದೇವಾಲಯದಲ್ಲಿ ತೋರಿಸಿದಳು, ತಾನೇ ಎಲ್ಲವೂ ಆಗಿರುವುದಾಗಿ. ತೋರಿಸಿದಳು, ಎಲ್ಲವೂ ಚಿನ್ಮಯವಾಗಿರುವುದನ್ನು. ಪ್ರತಿಮೆ ಚಿನ್ಮಯವಾಗಿ, ವೇದಿಕೆ ಚಿನ್ಮಯವಾಗಿ, ಕೋಶಾ-ಕುಶಿ (ಪೂಜಾಪಾತ್ರೆ) ಚಿನ್ಮಯವಾಗಿ, ಬಾಗಿಲ ಚೌಕಟ್ಟು ಅಮೃತಶಿಲೆ ಎಲ್ಲ ಚಿನ್ಮಯವಾಗಿ ಕಂಡವು.

❁ ಭಕ್ತನ ಹೃದಯ ಭಗವಂತನ ಆವಾಸಸ್ಥಾನ. ಆತ ಸರ್ವಭೂತಗಳಲ್ಲೂ ಇರುವುದೇನೋ ನಿಜ, ಆದರೆ ಭಕ್ತನ ಹೃದಯದಲ್ಲಿ ವಿಶೇಷ ರೂಪದಿಂದ ಇರುತ್ತಾನೆ. ಜಮೀನುದಾರ ತನ್ನ ಎಸ್ಟೇಟಿನಲ್ಲಿ ಎಲ್ಲಿ ಬೇಕಾದರಲ್ಲಿ ಇರಬಲ್ಲ. ಆದರೆ ಆತನನ್ನು ವಿಶೇಷವಾಗಿ ಆತನ ಬೈಠಕ್‌ಖಾನೆಯಲ್ಲಿ ನೋಡಬಹುದು ಎಂಬುದಾಗಿ ಜನ ಹೇಳುತ್ತಾರೆ. ಭಕ್ತನ ಹೃದಯ ಭಗವಂತನ ಬೈಠಕ್‌ಖಾನೆ.

❁ ಜೀವ, ಜಗತ್ತು, ಚತುರ್ವಿಂಶತಿ ತತ್ತ್ವ ಇವೆಲ್ಲಾ ಭಗವಂತನಿರುವುದರಿಂದ ಇದ್ದುಕೊಂಡಿವೆ. ಆತನನ್ನು ಬಿಟ್ಟುಬಿಟ್ಟರೆ ಯಾವುವೂ ಇರಲಾರವು. ಒಂದು ಎನ್ನುವ ಸಂಖ್ಯೆಯ ಪಕ್ಕದಲ್ಲಿ ಸೊನ್ನೆಗಳನ್ನು ಬರೆಯುತ್ತಾ ಹೋದರೆ ಸಂಖ್ಯೆ ದೊಡ್ಡದೊಡ್ಡದಾಗುತ್ತಾ ಬರುತ್ತದೆ. ಆದರೆ ಆ ಒಂದನ್ನು ಅಳಿಸಿಬಿಡು, ಆಗ ಸೊನ್ನೆಗಳಿಗೆ ಯಾವ ಬೆಲೆಯೂ ಇರದು.

❁ ಏನೇನು ನಿನ್ನ ಕಣ್ಣಿಗೆ ಬೀಳುತ್ತಿರುವುವೋ ಎಲ್ಲವೂ ಭಗವಂತನ ಶಕ್ತಿಯಿಂದ ಉತ್ಪನ್ನವಾದುವೇ. ಆ ಶಕ್ತಿಯನ್ನು ಬಿಟ್ಟು ಯಾರೂ ಏನನ್ನೂ ಮಾಡುವ ಹಾಗಿಲ್ಲ. ಆದರೆ ಒಂದು ವಿಷಯ. ಆತನ ಶಕ್ತಿ ಎಲ್ಲರಲ್ಲೂ ಒಂದೇ ಸಮನಾಗಿ ವ್ಯಕ್ತವಾಗಿಲ್ಲ. ಒಮ್ಮೆ ವಿದ್ಯಾಸಾಗರ ಕೇಳಿದ: 'ಅನು, ಭಗವಂತ ಕೆಲಕೆಲವರಿಗೆ ಹೆಚ್ಚು ಶಕ್ತಿ ಕೊಡುತ್ತಾನೇನು?' ನಾನು ಹೇಳಿದೆ: 'ಆತ ಹೆಚ್ಚುಕಡಿಮೆ ಕೊಡದಿದ್ದ ಪಕ್ಷದಲ್ಲಿ ನಿನ್ನನ್ನು ನೋಡಲು ನಾವೇಕೆ ಇಲ್ಲಿಗೆ ಬಂದಿದ್ದೇವೆ? ನಿನಗೇನು ಎರಡು ಕೊಂಬು ಬೆಳೆದಿವೆಯೆ?' ಆದ್ದರಿಂದ ಭಗವಂತ ವಿಭುರೂಪದಿಂದಲೇನೋ ಸರ್ವಭೂತಗಳಲ್ಲಿಯೂ ಇದ್ದಾನೆ. ಆದರೆ ಆವಿರ್ಭಾವದಲ್ಲಿ ತರತಮವಿದೆ. ಇದು ನ್ಯಾಯಸಮ್ಮತವಾಗಿದೆ.

❁ ನನ್ನ ಭಾವ ಏನೆಂಬುದು ನಿನಗೆ ಗೊತ್ತೆ? ನಾನು ಯಂತ್ರ, ಆಕೆ ಯಂತ್ರಿ; ನಾನು ಗೃಹ, ಆಕೆ ಗೃಹಿಣಿ; ನಾನು ಎಂಜಿನ್, ಆಕೆ ಇಂಜಿನೀಯರ್; ನಾನು ರಥ, ಆಕೆ ರಥಿ; ಆಕೆ ನಡೆಸಿದಂತೆ ನಡೆಯುತ್ತೇನೆ, ಮಾಡಿಸಿದಂತೆ ಮಾಡುತ್ತೇನೆ.

❁ ಪಶುಭಾವ ನಾಶವಾಗದೆ ಇದ್ದರೆ ಭಗವಂತನ ಆನಂದದ ಸವಿಯನ್ನು ಸವಿಯಲಾಗುವುದಿಲ್ಲ. ಪಶುಭಾವ ಹೃದಯವನ್ನು ಬಿಟ್ಟು ತೊಲಗಿಹೋಗುವಂತೆ ಭಗವಂತನಿಗೆ ಪ್ರಾರ್ಥನೆ ಮಾಡಬೇಕು; ವ್ಯಾಕುಲಚಿತ್ತದಿಂದ ಪ್ರಾರ್ಥನೆ ಮಾಡಬೇಕು. ಭಗವಂತ ಅಂತರ್ಯಾಮಿ, ನಾವು ಹೃತ್ಪೂರ್ವಕವಾಗಿ ಪ್ರಾರ್ಥನೆ ಮಾಡಿದ್ದೇ ಆದರೆ ಆತ ಕೇಳಿಯೇ ಕೇಳುತ್ತಾನೆ.

❁ ಈಶ್ವರ ತತ್ತ್ವಕ್ಕಾಗಿ ಹುಡುಕುತ್ತಿದ್ದರೆ ಅದನ್ನು ಮಾನವನಲ್ಲಿ ಹುಡುಕು. ಆತ ಮಾನವನಲ್ಲಿ ವಿಶೇಷವಾಗಿ ವ್ಯಕ್ತವಾಗಿದ್ದಾನೆ.

❁ ಭಗವಂತನೇ ಶುದ್ಧ-ಮನಸ್ಸು, ಶುದ್ಧ-ಬುದ್ಧಿಯಾಗಿ ನಮ್ಮ ಅಂತರ್ಯದಲ್ಲಿ ವಾಸಿಸುತ್ತಿದ್ದಾನೆ.

❁ ಭಗವಂತನಲ್ಲಿ ಪ್ರೀತಿ ಇದ್ದರೆ ಸಾಕು. ಆತ ಅಂತರ್ಯಾಮಿ. ನಮ್ಮ ಅಂತರ್ಯದಲ್ಲಿರುವ ಪ್ರೀತಿ ವ್ಯಾಕುಲತೆ ಏನು ಎಂಬುದನ್ನು ಆತ ಅರಿತುಕೊಳ್ಳಬಲ್ಲ. ಉದಾಹರಣೆಗೆ ಒಬ್ಬನಿಗೆ ಅನೇಕ ಮಕ್ಕಳು ಅಂತ ಇಟ್ಟುಕೊಳ್ಳಿ. ದೊಡ್ಡ ಮಕ್ಕಳು ಆತನನ್ನು ಸ್ಪಷ್ಟವಾಗಿ 'ಅಪ್ಪ', 'ಅಯ್ಯ' ಎಂಬುದಾಗಿ ಕರೆಯುತ್ತವೆ. ಆದರೆ ಎಳೆಯ ಮಕ್ಕಳು ಅತಿ ಹೆಚ್ಚೆಂದರೆ 'ಪಾ', 'ಯಾ' ಎಂಬುದಾಗಿ ಕರೆಯಬಲ್ಲುವು. ಈ ರೀತಿ ಅಸ್ಪಷ್ಟವಾಗಿ ಮಾತನಾಡುವ ಮಕ್ಕಳ ಮೇಲೆ ತಂದೆ ಕೋಪಿಸಿಕೊಳ್ಳುತ್ತಾನೇನು?

❁ ಆಕಾಶ, ನಕ್ಷತ್ರ, ಚಂದ್ರ, ಸೂರ್ಯ, ಪರ್ವತ, ಸಮುದ್ರ, ಜೀವ, ಜಂತು ಎಲ್ಲವನ್ನೂ ಭಗವಂತ ಸೃಷ್ಟಿಸಿದ್ದಾನೆ. ಇವೆಲ್ಲವೂ ಆತನ ಐಶ್ವರ್ಯವೇ. ಆತ ನಮ್ಮ ಅಂತರ್ಯದಲ್ಲಿ, ಹೃದಯಮಧ್ಯದಲ್ಲಿ ಇದ್ದಾನೆ. ಮತ್ತೆ ಹೊರಗೂ ಇದ್ದಾನೆ. ಉತ್ತಮ ಭಕ್ತ ಹೇಳುತ್ತಾನೆ, ಆತನೇ ಈ ಚತುರ್ವಿಂಶತಿ ತತ್ತ್ವ-ಜೀವಜಗತ್ತು ಆಗಿದ್ದಾನೆ.

ಶ್ರೀರಾಮಕೃಷ್ಣ ವಚನವೇದದಿಂದ

# ನವರಾತ್ರಿ ಅಥವಾ ದುರ್ಗಾಪೂಜೆಯ ಮಹತ್ವ



**ಶ**ರತ್ಕಾಲದಲ್ಲಿ ನಡೆಯುವ ನವರಾತ್ರಿ ಅಥವಾ ದಸರಾ ಉತ್ಸವ ಭಾರತದಾದ್ಯಂತ ನಡೆಯುವ ಅತ್ಯಂತ ಪ್ರಧಾನ ಹಬ್ಬವಾಗಿದೆ. ದುರ್ಗಾಮಾತೆಯು ರಾಕ್ಷಸಕುಲವನ್ನೆಲ್ಲ ಸಂಹಾರ ಮಾಡಿ, ದೇವತೆಗಳನ್ನೂ, ಭಕ್ತಜನರನ್ನೂ ಸಲಹಿದ ಪೌರಾಣಿಕ ಐತಿಹ್ಯವೇ ಈ ಉತ್ಸವದ ಹಿನ್ನೆಲೆಯಾಗಿದೆ. ದೇವೀ ದೇವಾಲಯಗಳಲ್ಲೂ, ಮನೆಮನೆಗಳಲ್ಲೂ, ಸಾರ್ವಜನಿಕ ವೇದಿಕೆಗಳಲ್ಲೂ ನಡೆಯುವ ಈ ಉತ್ಸವಗಳಲ್ಲಿ ಜಗನ್ಮಾತೆಯ ಶಕ್ತಿ, ಮಹಿಮೆ, ದೈವೀ ವ್ಯಕ್ತಿತ್ವಗಳನ್ನು ಪೂಜಿಸುವುದರೊಂದಿಗೆ, ಸಂಸಾರಸಾಗರದಿಂದ ಪಾರಾಗ ಬಯಸುವ ಆಧ್ಯಾತ್ಮಿಕ ಸಾಧಕನಿಗೆ ಸ್ಫೂರ್ತಿ, ಚೈತನ್ಯ ನೀಡುವ ಒಂದು ಸಂದರ್ಭವೂ ಅದಾಗಿದೆ. ಸಾರ್ವಜನಿಕರೊಂದಿಗೆ ಒಟ್ಟಾಗಿ ಸಲ್ಲಿಸುವ ಪೂಜೆ, ಪ್ರಾರ್ಥನೆ, ಭಕ್ತಿಯ ಆಚರಣೆಗಳು ನಮ್ಮ ಸಾಮಾಜಿಕ ಸಂಸ್ಕೃತಿಯ ದ್ಯೋತಕವಾಗಿದೆ; ಅಂತೆಯೇ ವೈಯಕ್ತಿಕವಾಗಿ ನಾವು ಮಾಡುವ ಪೂಜೆ, ವ್ರತ, ಪಾರಾಯಣ, ಜಪ ಧ್ಯಾನಾದಿಗಳು ಆಧ್ಯಾತ್ಮಿಕ ಪಿಪಾಸುವಿನ ಆಂತರಿಕ ಬದುಕಿನ ಅಂಗವಾಗಿವೆ. ಪರಬ್ರಹ್ಮನ ಇನ್ನೊಂದು ರೂಪವೇ ಶಕ್ತಿ; ಆ

## 'ದುರ್ಗಾಸಪ್ತಶತೀ' ಕೃತಿಯ ಮಹತ್ವ

ದೇವಿಯ ಉಪಾಸನೆಯು ಕೇವಲ ತಾಂತ್ರಿಕವೆಂದಾಗಲಿ ಅಥವಾ ಪೌರಾಣಿಕವೆಂದಾಗಲಿ ತಿಳಿಯಕೂಡದು; ಇದು ಋಗ್ವೇದದಷ್ಟೇ ಪುರಾತನವಾಗಿದೆ. ಋಗ್ವೇದದ ಹತ್ತನೆಯ ಮಂಡಲದಲ್ಲಿ ಬರುವ ದೇವೀಸೂಕ್ತ – ರಾತ್ರೀಸೂಕ್ತಗಳು ದೇವಿಯ ಪರವಾಗಿವೆ. ವೈದಿಕ–ಯುಗದಲ್ಲಿ ಅಂಭೃಣ ಎಂಬ ಮಹರ್ಷಿಯಿದ್ದನು. ಅವನಿಗೆ ಬ್ರಹ್ಮ ವಿದುಷಿಯಾದ ವಾಕ್ ಎಂಬ ಮಗಳಿದ್ದಳು. ಅವಳೇ ಈ ದೇವೀಸೂಕ್ತದ ಋಷಿ; ಸಚ್ಚಿದಾನಂದಸ್ವರೂಪನಾದ ಪರಮಾತ್ಮನೇ ದೇವತೆ. ಪರಮಾತ್ಮನೊಂದಿಗೆ ಐಕ್ಯವನ್ನು ಅನುಭವಿಸುತ್ತಿರುವ ಆ ಋಷಿಪುತ್ರಿಯು ಸರ್ವಜಗದ್ರೂಪದಿಂದ ಸಮಸ್ತ ಕಾರ್ಯಗಳ ಅಧಿಷ್ಠಾತ್ರಿವೇ ತಾನಾಗಿರುವೆನೆಂದು ಭಾವಿಸಿ ತನ್ನನ್ನೇ ಈ ಸೂಕ್ತದಲ್ಲಿ ಸ್ತುತಿಸಿಕೊಂಡಿರುತ್ತಾಳೆ. ಮೊದಲನೆಯ ಸೂಕ್ತದ ಪ್ರಕಾರ ದೇವಿಯೇ ಸಮಸ್ತ ದೇವತೆಗಳ ರೂಪದಿಂದ ಸಂಚರಿಸುತ್ತಾಳೆ. ಎರಡನೆಯ ಸೂಕ್ತದ ಪ್ರಕಾರ ದೇವಿಯು ಸೋಮವನ್ನು ಪೋಷಿಸುತ್ತಾಳೆ ಮತ್ತು ಸೋಮರಸವನ್ನು ಹಿಂಡಿ ಅರ್ಪಿಸುವ ಯಜಮಾನನಿಗೆ ಧನವನ್ನು ಕೊಡುತ್ತಾಳೆ. ಮೂರನೆಯ ಸೂಕ್ತದ ಪ್ರಕಾರ ಸಮಸ್ತ ಜಗತ್ಸ್ವಾಮಿನಿಯಾದ ಮಹಾದೇವಿಯೇ ಎಲ್ಲ ಪ್ರಾಣಿಗಳಲ್ಲಿಯೂ ಜೀವರೂಪದಿಂದ ನೆಲೆಸಿರುತ್ತಾಳೆ. ಮನುಷ್ಯನು




ತನ್ನ ಸಕಲ ವ್ಯಾಪಾರಗಳನ್ನೂ ದೇವಿಯ ಮೂಲಕವೇ ನಡೆಸುತ್ತಾನೆಂಬುದು ನಾಲ್ಕನೆಯ ಸೂಕ್ತದ ಅಭಿಪ್ರಾಯ. ತಾನೇ ಪರಬ್ರಹ್ಮಾತ್ಮಕ ವಸ್ತುವೆಂದೂ ತನ್ನಿಂದಲೇ ಮನುಷ್ಯನು ಉತ್ತಮ ಪದವಿಯನ್ನಾಗಲಿ, ಋಷಿತ್ವನ್ನಾಗಲಿ ಹೊಂದುತ್ತಾನೆಂದೂ ದೇವಿಯು ಐದನೆಯ ಸೂಕ್ತದಲ್ಲಿ ತಿಳಿಸುತ್ತಾಳೆ. ರುದ್ರನು

ದುಷ್ಟರನ್ನು ಸಂಹರಿಸುವಾಗ ದೇವಿಯೇ ಅವನ ಧನುಸ್ಸನ್ನು ಬಗ್ಗಿಸುತ್ತಾಳೆ ಮತ್ತು ದ್ಯಾವಾ ಪೃಥಿವಿಗಳನ್ನು ಅಂತರ್ಯಾಮಿ ರೂಪದಿಂದ ಪ್ರವೇಶಿಸಿದ್ದಾಳೆ – ಎಂಬುದು ಆರನೆಯ ಸೂಕ್ತದ ಅಭಿಪ್ರಾಯ. ದೇವಿಯೇ ಪಿತೃಭೂತವಾದ ಸ್ವರ್ಗವನ್ನು ಮೇಲುಭಾಗದಲ್ಲಿ ಉತ್ಪತ್ತಿ ಮಾಡಿರುತ್ತಾಳೆ ಎಂದು ಏಳನೆಯ ಸೂಕ್ತವು ತಿಳಿಸುತ್ತದೆ. ಲೋಕಗಳನ್ನು ಉತ್ಪತ್ತಿಮಾಡುತ್ತ, ವಾಯುವಿನಂತೆ ಬೀಸುತ್ತ, ದ್ಯಾವಾಪೃಥಿವಿಗಳ ಆಚೆ ತನ್ನ ಮಹಿಮೆಯಲ್ಲಿಯೇ ದೇವಿಯು ನಿಂತಿರುತ್ತಾಳೆಂದು ಕೊನೆಯ ಸೂಕ್ತವು ತಿಳಿಸುತ್ತದೆ. ಸಚ್ಚಿದಾನಂದ ಸ್ವರೂಪನಾದ ಭಗವಂತನೇ ಜಗದ್ರೂಪದಿಂದ ಇರುವನೆಂದೂ ಸಮಸ್ತ ದೇವತೆಗಳ ಶಕ್ತಿಯಾಗಿರುವನೆಂಬುದೂ ದೇವೀಸೂಕ್ತದ ತಾತ್ಪರ್ಯವಾಗಿದೆ. ಸುರಥ ಮತ್ತು ಸಮಾಧಿ–ಇವರಿಬ್ಬರೂ ದೇವೀಸೂಕ್ತವನ್ನು ಜಪಿಸುತ್ತ ತಪಸ್ಸನ್ನು ಮಾಡಿದರೆಂದು ದೇವೀಮಹಾತ್ಮ್ಯವು (೧೩.೯) ತಿಳಿಸುತ್ತದೆ.

ಮಾರ್ಕಂಡೇಯಮುನಿಯು ಕ್ರೌಷ್ಟುಕಿಗೆ ದೇವೀಮಹಾತ್ಮ್ಯವನ್ನು ವಿವರಿಸುತ್ತಾನೆ. ಇದು ಪುರಾಣದ ಒಂದು ಭಾಗವಾಗಿದ್ದರೂ ಮಂತ್ರಶಾಸ್ತ್ರವೆಂದು ತಂತ್ರಗಳಲ್ಲಿ ಪ್ರಸಿದ್ಧವಾಗಿದೆ. ಕಾತ್ಯಾಯಿನೀ – ತಂತ್ರದ ಪ್ರಕಾರ ದೇವೀಮಹಾತ್ಮ್ಯದ ಪ್ರತಿಯೊಂದು ಶ್ಲೋಕವೂ ಮಂತ್ರವಾಗಿದ್ದು ದೇವೀಪೂಜೆಯಲ್ಲಿ ಪ್ರಯೋಗಿಸಲ್ಪಡುತ್ತದೆ. ಮಂತ್ರಕ್ಕೂ ದೇವಿಗೂ ಯಾವ ಭೇದವೂ ಇಲ್ಲ, ಆದುದರಿಂದಲೇ ದೇವೀಮಹಾತ್ಮ್ಯವನ್ನು ವಿಪದ್ಭಂಜನಕ್ಕೆ, ದೇವಿಯ ಅನುಗ್ರಹಕ್ಕೆ ಮತ್ತು ಸುಖಪ್ರಾಪ್ತಿಗೆ ಉಪಾಸಕರು ಮನೆಮನೆಯಲ್ಲಿಯೂ ಪಾರಾಯಣ ಮಾಡುತ್ತಾರೆ.

ದೇವೀಮಹಾತ್ಮ್ಯದಲ್ಲಿ ಮೂರು ಚರಿತ್ರೆಗಳಿವೆ; ಒಂದೊಂದು ಚರಿತ್ರವೂ ದೇವಿಯ ಅಸಾಧಾರಣರೂಪದ ಮಹಾತ್ಮ್ಯವನ್ನು ಪ್ರಕಾಶಪಡಿಸುತ್ತದೆ. ಮಹಾಕಾಳಿಗೆ ಸಂಬಂಧಿಸಿದ ಪ್ರಥಮ ಚರಿತ್ರವು ಮೊದಲನೆಯ ಅಧ್ಯಾಯದಲ್ಲಿ ಅಡಕವಾಗಿದೆ. ಮಹಾಲಕ್ಷ್ಮಿಗೆ ವಿನಿಯೋಗಿಸಲ್ಪಟ್ಟಿರುವ ದ್ವಿತೀಯಚರಿತ್ರವು ಮುಂದಿನ ಮೂರು ಅಧ್ಯಾಯಗಳಲ್ಲಿ ಬರುತ್ತದೆ. ಮಹಾಸರಸ್ವತಿಗೆ ನಿವೇದಿಸಲ್ಪಟ್ಟಿರುವ ತೃತೀಯಚರಿತ್ರವು ಉಳಿದ ಅಧ್ಯಾಯಗಳನ್ನು ಒಳಗೊಂಡಿದೆ.

ದೇವೀಮಹಾತ್ಮ್ಯದಲ್ಲಿ ಬರುವ ಸ್ತವಗಳೆಲ್ಲ ಅತ್ಯಂತ ಲಲಿತವಾದ ರಮಣೀಯವಾದ ಕಾವ್ಯಭಾಷೆಯಲ್ಲಿ ದೇವಿಯ ಉಗ್ರ–ಸುಂದರ ರೂಪಗಳನ್ನೂ ದುಷ್ಟಮರ್ದನ–ಶಿಷ್ಟರಕ್ಷಣಗಳನ್ನೂ ಬಹು ವಿಧ ಶಕ್ತಿಗಳನ್ನೂ, ವಂದಾರುಜನ ವಾತ್ಸಲ್ಯವನ್ನೂ ಜಗತ್ತಿನ ಸೃಷ್ಟಿಸ್ಥಿತಿ ಲಯಗಳಿಗೆ ಅವಳು ಕಾರಣವಾಗಿರುವದನ್ನೂ ವರ್ಣಗಳಲ್ಲಿ ಮಾತೃಕೆಯಾಗಿರುವುದನ್ನೂ, ವೇದಮಂತ್ರಗಳ ಸ್ವರೂಪವಾಗಿರುವುದನ್ನೂ ವರ್ಣಿಸಿ, ನಮಗೆ ಅವಳಲ್ಲಿ ಭಕ್ತಿಯನ್ನೂ ಸಮಸ್ತ ಸ್ತ್ರೀಯರಲ್ಲಿ ಮಾತೃಭಾವವನ್ನೂ ಉತ್ಪನ್ನ ಮಾಡುತ್ತವೆ. ✴

*–ಸ್ವಾಮಿ ಆದಿದೇವಾನಂದ (ಸ್ವಾಮಿ ಹರ್ಷಾನಂದರ 'ದುರ್ಗಾ ಸಪ್ತಶತೀ' ಗ್ರಂಥಕ್ಕೆ ಬರೆದ ಮುನ್ನುಡಿಯಿಂದ)*

ಶಕ್ತಿಯೇ ದುರ್ಗಾಮಾತೆಯಾಗಿ, ಅವಳ ವಿವಿಧ ಆವಿರ್ಭಾವಗಳಾಗಿ ರೂಪತಳೆದಿದೆ. ಒಬ್ಬೊಬ್ಬ ವ್ಯಕ್ತಿಗೂ ಒಂದೊಂದು ಸ್ವಂತ ಮನೋಭಾವವಿದೆ; ಅಂತೆಯೇ ಸಾಧಕರಲ್ಲೂ ಹಲವು ಬಗೆಯ ಮನೋಧರ್ಮಗಳಿವೆ. ಯಾವ ಮನೋಧರ್ಮಕ್ಕೆ ಯಾವ ದೈವೀರೂಪ ಹೆಚ್ಚು ಆಪ್ಯಾಯಮಾನವಾಗುವುದೋ, ಅದಕ್ಕನುಗುಣವಾಗಿ ಅವನ ಶ್ರದ್ಧೆ ಜಾಗೃತವಾಗುವುದು. ಈ ಮನೋವೈಜ್ಞಾನಿಕ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ದುರ್ಗೆಯ ಹಲವು ರೂಪಗಳಿಗೆ, ಹಲವು ಆವಿರ್ಭಾವಗಳಿಗೆ ವಿಶೇಷ ಅರ್ಥವಿದೆ. ಎಷ್ಟೆಷ್ಟು ಬಗೆಯಲ್ಲಿ ಅವಳ ರೂಪಗಳಿವೆಯೋ, ಅಷ್ಟಕ್ಕೂ ಒಂದಲ್ಲ ಒಂದು ಪೌರಾಣಿಕ ಕಥೆಯಿದೆ. ಹೀಗೆ ಜಗನ್ಮಾತೆಯ ರೂಪ, ಅವಳ ಚರಿತ್ರೆ, ಅವಳ ಆರಾಧನೆ – ಇವು ಸದಾ ಜೊತೆಜೊತೆಯಾಗಿಯೇ ಸಾಗುತ್ತವೆ. ಸಂಸಾರಚಕ್ರದ ಮಹಾಯಾತ್ರೆಯಲ್ಲಿ ಅಸಂಖ್ಯಾತ ಜೀವಿಗಳು ಮುಳುಗೇಳುತ್ತವೆ; ಮಹಾಮಾತೆಯ ಕರುಣಾಕಟಾಕ್ಷಕ್ಕಾಗಿ ಒಂದುಕ್ಷಣ ಹಾತೊರೆಯುತ್ತವೆ.

ದುರ್ಗಾಮಾತೆಯ ಆರಾಧನೆಯ ಹಿಂದಿರುವ ಪೌರಾಣಿಕ ಕಥೆಗಳು ನಮ್ಮ ನಾಡಿನ ಜನಜೀವನದಲ್ಲಿ ಹಾಸುಹೊಕ್ಕಾಗಿದೆ. **ದುರ್ಗಾಸಪ್ತಶತೀ, ದೇವೀಭಾಗವತ** ಈ ಎರಡು ಪ್ರಧಾನ ಕೃತಿಗಳು ದೇವೀಚರಿತ್ರೆಯನ್ನು ವಿಸ್ತಾರವಾಗಿ ವರ್ಣಿಸುತ್ತವೆ. ದೇವಿಯ ಆವಿರ್ಭಾವ, ಮಧುಕೈಟಭ ವಧೆ, ಮಹಿಷಾಸುರ ವಧೆ, ಶುಂಭನಿಶುಂಭ, ರಕ್ತಬೀಜ, ಚಂಡಮುಂಡರೇ ಮೊದಲಾದ ಅಸುರರ ನಿಗ್ರಹ – ಇವುಗಳಿಂದ ಕೂಡಿದ ಈ ಚರಿತ್ರೆಯಲ್ಲಿ ಮಾನವನಲ್ಲಿ ಸ್ವಭಾವ್ಯಜನ್ಯವಾಗಿ ಬಂದಿರುವ ಆಸುರೀಶಕ್ತಿಗಳನ್ನು ದೈವೀಶಕ್ತಿಯು ಸಂಹಾರಮಾಡುವ, ಆ ಮೂಲಕ ಅವನು ಆಧ್ಯಾತ್ಮಿಕವಾಗಿ ಮುನ್ನಡೆಯುವ ಸಾಂಕೇತಿಕ ಅರ್ಥವನ್ನೂ ಕಾಣಲಾಗುತ್ತದೆ. ಕಲೆ, ಸಾಹಿತ್ಯ, ನಾಟಕ, ಯಕ್ಷಗಾನವೇ ಮೊದಲಾದ ಕ್ಷೇತ್ರಗಳಲ್ಲಿ ಈ ಬಗೆಯ ವಿವರಣೆಗಳು ಹೊಸ ಹೊಸ ಅರ್ಥ ಪಡೆಯುತ್ತವೆ. ಬಂಗಾಳದಲ್ಲಂತೂ 'ದುರ್ಗಾಪೂಜೆ'ಯ ದಿನಗಳು ಬಂದವೆಂದರೆ ನಾಡಿನ ಚಿತ್ರವೇ ಬದಲಾಗುತ್ತದೆ. ಪ್ರತಿಯೊಂದು ಮನೆಗಳಲ್ಲೂ, ಬೀದಿಬೀದಿಗಳಲ್ಲೂ ಉತ್ಸವದ ವಾತಾವರಣ, ವಿಜೃಂಭಣೆಯ ಆಚರಣೆಗಳು ಕಂಡುಬರುತ್ತವೆ. ಸ್ತ್ರೀಯನ್ನು ಶಕ್ತಿಯಾಗಿ ಆರಾಧಿಸುವ, ಎಲ್ಲ ಗಂಡಾಂತರಗಳಿಂದ ಪಾರುಮಾಡುವ ರಕ್ಷಕಿಯಾಗಿ ಪರಿಗಣಿಸುವ, ಇಡೀ ಸೃಷ್ಟಿಯ ಜನನಿಯೆಂದು ಪೂಜಿಸುವ ದಿವ್ಯಭಾವನೆ ಹಿಂದೂಧರ್ಮದಲ್ಲಿ ಅತ್ಯಂತ ವಿಶಿಷ್ಟವಾದುದು. **'ಯಾ ದೇವೀ ಸರ್ವಭೂತೇಷು ...'**

ಎಂದು ಆರಂಭವಾಗುವ ಸ್ತುತಿಯಲ್ಲಿ ದೇವಿಯು ಸಕಲಜೀವಿಗಳ, ಸರ್ವಭೂತಗಳ ಅಂತರ್ಯಾಮಿಯಾಗಿರುವಳು ಎಂದೂ, ಅವಳೇ ಇಡೀ ಜಗಲ್ಲೀಲೆಯ ನಿಯಂತ್ರುವಾಗಿದ್ದಾಳೆ ಎಂದೂ ವರ್ಣಿಸಲಾಗಿದೆ. ಕಥೆಗಳ ಮೂಲಕ ದೇವಿಯು ಮಾನವ ವ್ಯಕ್ತಿತ್ವವನ್ನೂ, ಅಲೌಕಿಕ ಶಕ್ತಿ, ಸಾಮರ್ಥ್ಯಗಳ ಮೂಲಕ ದೈವೀ ವ್ಯಕ್ತಿತ್ವವನ್ನೂ ಸ್ತೋತ್ರಾದಿಗಳಲ್ಲಿ ಕಂಡುಬರುವ ತಾತ್ತ್ವಿಕ, ಭಾವನಾತ್ಮಕ ಚಿತ್ರಗಳಿಂದ ತನ್ನ ನಿರ್ಗುಣಸ್ವರೂಪವನ್ನೂ ಹೊಂದಿರುವಂತೆ ಚಿತ್ರಿಸಲಾಗಿದೆ.

ವಾಸ್ತವವಾಗಿ, ಇವು ವಿವಿಧ ಮಾನಸಿಕ ಸ್ತರಗಳಿಗೆ, ಸಾಧಕನ ಆಧ್ಯಾತ್ಮಿಕ ವಿಕಸನದ ವಿವಿಧ ಹಂತಗಳಿಗೆ ಅನುಗುಣವಾಗಿ ಅಭಿವ್ಯಕ್ತಿ ಪಡೆದಂತೆ ಕಂಡುಬರುತ್ತವೆ. ಸಾಮಾಜಿಕ, ಧಾರ್ಮಿಕ ಆಚರಣೆಯಾಗಿ ಪ್ರಸಿದ್ಧವಾಗಿರುವ ನವರಾತ್ರಿ ಅಥವಾ ದುರ್ಗಾಪೂಜೆಯ ಹಿಂದೆ ಹಲವು ಆಧ್ಯಾತ್ಮಿಕ ಅರ್ಥಗಳಿರುವುದನ್ನು ಕಂಡುಕೊಳ್ಳಬೇಕು. ಆಗ ನಮ್ಮ ಪರಂಪರೆಯನ್ನು ಸರಿಯಾಗಿ ಗುರುತಿಸಿದಂತಾಗುತ್ತದೆ; ಅದಕ್ಕೆ ಅನುಗುಣವಾಗಿ ಅವುಗಳನ್ನು ಆಚರಿಸಲು ಸಾಧ್ಯವಾಗುತ್ತದೆ. ✴

# ದುರ್ಗೆಯ ವಿವಿಧ ರೂಪಗಳು

*(ಸ್ವಾಮಿ ಹರ್ಷಾನಂದರು ರಚಿಸಿದ 'ಹಿಂದೂ ದೇವದೇವಿಯರು' ಗ್ರಂಥದಿಂದ ಆಯ್ದ ಭಾಗ)*



**ಬ**ಹುಶಃ ದುರ್ಗಾ ಅತ್ಯಂತ ಹೆಚ್ಚು ಪೂಜಿಸಲ್ಪಡುವ ಶಕ್ತಿಯ ರೂಪ. ದೇವೀಭಾಗವತವೆಂಬ ಒಂದು ಇಡಿಯ ಪುರಾಣವೇ ಅವಳಿಗಾಗಿ ಮುಡಿಪಾಗಿದೆ. ಜನರಿಗೆ ಹೆಚ್ಚು ಪರಿಚಿತವಾಗಿರುವ ದೇವೀಮಾಹಾತ್ಮ್ಯವೆಂಬ ಇನ್ನೊಂದು ಕೃತಿಯಲ್ಲಿ ಅದರಲ್ಲಿಯ ವಿಷಯವನ್ನೇ ಸಂಗ್ರಹವಾಗಿ ಹೇಳಲಾಗಿದೆ. ಮಾರ್ಕಂಡೇಯ ಪುರಾಣವೆಂಬ ಪ್ರಸಿದ್ಧ ಪುರಾಣದ ಭಾಗವಾದ ಇದಕ್ಕೆ **ದುರ್ಗಾ ಸಪ್ತಶತೀ** ಅಥವಾ **ಚಂಡೀ** ಎಂದೂ ಹೆಸರು. ಜನರಿಗೆ ಇದರ ಮೇಲೆ ಅದೆಷ್ಟು ಭಕ್ತಿ ಎಂದರೆ, ಇದರ ಒಂದೊಂದು ಶ್ಲೋಕವನ್ನೂ ದೇವಿಯ ಮೇಲಿನ ಒಂದು ಮಂತ್ರವೆಂದು ಭಾವಿಸುವರು; ಇದರ ಪುರಶ್ಚರಣವು ತಾವು ಪ್ರಾರ್ಥಿಸಿಕೊಂಡ ಯಾವುದೇ ವರವನ್ನು ಪ್ರದಾನ ಮಾಡಬಲ್ಲುದೆಂದು ನಂಬುವರು.

ದುರ್ಗಾ ಎಂದರೆ ಬಳಿಸಾರಲು ಕಷ್ಟವಾದುದು, ಅಥವಾ ಅರಿಯಲು ಕಷ್ಟವಾದುದು ಎಂದರ್ಥ. ದೇವತೆಗಳೆಲ್ಲರ ಒಟ್ಟು ಶಕ್ತಿಗಳು ಮೂರ್ತೀಭವಿಸಿದ ಅವಳನ್ನು ಅರಿಯುವುದೂ ಬಳಿಸಾರುವುದೂ ಸಹಜವಾಗಿ ಕಷ್ಟವೇ. ಆದರೂ, ಜಗನ್ಮಾತೆಯಾಗಿರುವ ಅವಳು, ಪ್ರಾರ್ಥಿಸಿಕೊಂಡ ಭಕ್ತನ ಪಾಲಿಗೆ ಮೃದುಹೃದಯದ ಪ್ರೇಮಮೂರ್ತಿಯೇ ಆಗುವಳು.

ಈ ಕೃತಿಯಲ್ಲಿ ಉಕ್ತವಾಗಿರುವ ಶಕ್ತಿಯ ಅನೇಕ ಮುಖಗಳಲ್ಲಿ, ಮೊದಲು ಬರುವುದು ಯೋಗನಿದ್ರಾ. ಅವಳೇ ನಿದ್ರೆಯ ಹಿಂದಿರುವ ಶಕ್ತಿ; ಅದನ್ನು ಆಧರಿಸಿಯೇ ವಿಷ್ಣುವು ಎರಡು ಕಲ್ಪಗಳ ನಡುವಣ ಕಾಲದಲ್ಲಿ ವಿಶ್ರಾಂತಿ ಪಡೆಯುವನು. ವಿಶ್ವದ ಸೃಷ್ಟಿ, ಸ್ಥಿತಿ ಹಾಗೂ ಲಯಗಳಿಗೆ ಕಾರಣಳು ಎಂದು ಅವಳನ್ನು ಸ್ತುತಿಸಿರುವರು. ಜ್ಞಾನಸ್ವರೂಪಿಯಾದ ಅವಳೇ ವಿವೇಚನೆ ನೆನಪುಗಳ ಹಿಂದಿರುವ ನಿಗೂಢವಾದ ಶಕ್ತಿ. ರೂಪಸಿಯೂ ಹಿತಕರಳೂ ಆದ ಅವಳು ಅದೇ ಕಾಲಕ್ಕೆ ಭಯಂಕರಳೂ ಆಗಬಲ್ಲಳು. ಈ ವಿರುದ್ಧ ಗುಣಗಳ ಸಂಯೋಜನೆ ಅವಳಿಗೆ ಮಾತ್ರವೇ ಸಾಧ್ಯ. ಅವಳು ಬಿಲ್ಲು, ಬಾಣ, ಖಡ್ಗ, ಚಕ್ರ, ತ್ರಿಶೂಲ ಮೊದಲಾದ ಅನೇಕ ಆಯುಧಗಳನ್ನು ಬಳಸಬಲ್ಲಳೆಂದು ವರ್ಣಿಸಿರುವರು.

ಮುಂದಿನದು ಮಹಿಷಾಸುರಮರ್ದಿನೀ – ಮಹಿಷಾಸುರನೆಂಬ ರಾಕ್ಷಸನು ದೇವತೆಗಳನ್ನು ಕಾಡುತ್ತಿದ್ದಾಗ ಅವರೆಲ್ಲರ ಶಕ್ತಿಗಳನ್ನೂ ಒಗ್ಗೂಡಿಸಿದ ಫಲವಾಗಿ ರೂಪುಗೊಂಡವಳು. ಮಹಿಷಾಸುರನ ದುಷ್ಕೃತ್ಯಗಳಿಂದ ಕೆರಳಿದ ವಿಷ್ಣು, ಶಿವ ಮತ್ತು ಬ್ರಹ್ಮರ ಹಾಗೂ ಇನ್ನುಳಿದ ದೇವತೆಗಳ ಕೋಪದ ಫಲವಾಗಿ ದೇವಿಯು ಹುಟ್ಟಿದಳು; ದೇವತೆಗಳ ಶಕ್ತಿಯಿಂದಲೇ ಅವಳ ಅಂಗಾಂಗಗಳು ರೂಪುಗೊಂಡವು; ದೇವತೆಗಳ ಆಯುಧಗಳೇ ಅವಳ ಆಯುಧಗಳಾದವು. ಎದುರಿಲ್ಲದ ಈ ಆಯುಧಗಳನ್ನು ಹಿಡಿದು, ಭೀಕರವಾದ ಸಿಂಹವೊಂದನ್ನೇರಿ, ಅವಳು ಮಹಿಷಾಸುರನನ್ನು ಎದುರಿಸಿದಳು; ಅವನನ್ನೂ ಅವನ ಸೈನ್ಯವನ್ನೂ ನಾಶಮಾಡಿದಳು.

ಈ ಕಥೆಯ ನಂತರ, ಭಕ್ತಿಪೂರ್ಣವೂ ಸೂಕ್ಷ್ಮದೃಷ್ಟಿಯ ಕಾವ್ಯಮಯತೆಯನ್ನು ಹೊಂದಿರುವುದೂ ಆದ ಒಂದು ಅದ್ಭುತ ಸ್ತುತಿಗೀತೆ ಬರುತ್ತದೆ.

ದೇವತೆಗಳು ತಮ್ಮ ಸ್ವಾತಂತ್ರ್ಯವನ್ನು ಬಹುಕಾಲ ಉಳಿಸಿಕೊಳ್ಳಲು ಆಗಲಿಲ್ಲ. ಶುಂಭ, ನಿಶುಂಭ ಎಂಬ ಅಸುರರು ಅವ

ರನ್ನು ಬೇಗನೇ ಜಯಿಸಿಬಿಟ್ಟರು. ಹೀಗಾಗಿ ಅವರು ಹಿಮಾಲಯಕ್ಕೆ ಪಲಾಯನ ಮಾಡಿ ದೇವಿಯನ್ನು ಪ್ರಾರ್ಥಿಸಿಕೊಳ್ಳಬೇಕಾಯಿತು. '**ಅಪರಾಜಿತಾಸ್ತೋತ್ರ**' ಎಂದು ಈ ಸ್ತುತಿ ಪ್ರಸಿದ್ಧವಾಗಿದೆ. ತಾಯಿ ಸಮಸ್ತ ಜೀವಿಗಳಲ್ಲೂ ಅಂತರ್ಗತಳಾಗಿರುವಳು ಎನ್ನುವುದು ಈ ಸ್ತುತಿಯ ಮುಖ್ಯ ಧೋರಣೆ. ಸಮಸ್ತ ಜೀವಿಗಳ ಶಕ್ತಿ, ಚಟುವಟಿಕೆಗಳು ತಾಯಿಯ ಶಕ್ತಿಯ ಆವಿರ್ಭಾವನಗಳೇ ಆಗಿವೆ.

ಈ ಸ್ತುತಿಗೆ ಪ್ರತಿಕ್ರಿಯೆ ಎಂಬಂತೆ ಅವಳು ಪಾರ್ವತಿಯ ಶರೀರದಿಂದ ಕೌಶಿಕೀ ದುರ್ಗಾ ಎಂಬ ರೂಪ ತಳೆದು ಉತ್ಸರ್ಜನೆಗೊಂಡಳು. ಅವಳೇ ಮುಂದೆ ಕಾಳೀ (ಕಪ್ಪಾದ ಶರೀರವುಳ್ಳವಳು) ಆದಳು.

ಇದರಿಂದ ಮುಂದೆ ಇನ್ನೊಂದು ಕಾವ್ಯಮಯವಾದ, ಮನಸ್ಸನ್ನು ಮುದಗೊಳಿಸುವ, ಸರಳವಾಗಿದ್ದೂ ಭವ್ಯವಾಗಿರುವ ಸ್ತುತಿಗೀತೆ ಬರುತ್ತದೆ. '**ನಾರಾಯಣೀಸ್ತುತಿ**' ಎಂಬ ಹೆಸರುಳ್ಳ ಇದು ಕೃತಜ್ಞತೆಯಿಂದ ತುಂಬಿಹೋದ ದೇವತೆಗಳು ತಾಯಿಯನ್ನು ಕರುಣೆಯಿಂದ ತಮ್ಮನ್ನು ಅನುಗ್ರಹಿಸುವಂತೆ ಬೇಡಿಕೊಳ್ಳುವ ಸ್ತುತಿ. ಸೃಷ್ಟಿಯೆಲ್ಲದರ ತಾಯಿಯಾದ ಅವಳನ್ನು ಅದು ಒಡತಿ ಎಂದು ಸಂಬೋಧಿಸುತ್ತದೆ. ಭೌತವಿಶ್ವವಾಗಿರುವವಳು ಅವಳೇ; ಅದಕ್ಕೆ ಮೂಲಕಾರಣವಾದ ವೈಷ್ಣವೀಶಕ್ತಿಯೂ ಅವಳೇ. ಜೀವಿಗಳನ್ನು ಮಾಯೆಗೆ ಒಳಪಡಿಸುವ ಶಕ್ತಿಯೂ ಅವಳೇ; ಅವಳು ಪ್ರೀತಳಾದರೆ ಮಾತ್ರವೇ ಯಾರಾದರೂ ಆಧ್ಯಾತ್ಮಿಕವಾಗಿ ಮುಕ್ತಿಯನ್ನು ಪಡೆಯಲು ಸಾಧ್ಯ. ಸಮಸ್ತ ಕಲಾಪ್ರಕಾರಗಳು, ವಿಜ್ಞಾನಶಾಸ್ತ್ರಗಳು, ಸಮಸ್ತ ಸ್ತ್ರೀಯರು ಎಲ್ಲವೂ ಅವಳ ಆವಿರ್ಭಾವನವೇ ಆಗಿವೆ. ಮನುಷ್ಯರ ಹೃದಯದಲ್ಲಿರುವ ಬುದ್ಧಿಯ ರೂಪದಲ್ಲಿ ತಾಯಿಯು ನೆಲೆಸಿದ್ದಾಳೆ. ಅವಳೇ ಎಲ್ಲವನ್ನೂ ನುಂಗಿ ನೊಣೆಯುವ ಕಾಲ. ಒಳ್ಳೆಯದೆಲ್ಲದರ, ಪವಿತ್ರವಾದ ಎಲ್ಲದರ ಮೂರ್ತರೂಪವೇ ಅವಳು. ಅವಳು ಯಾವಾಗಲೂ ತನ್ನ ಮಕ್ಕಳನ್ನು ರಕ್ಷಿಸುವುದರಲ್ಲಿ ನಿರತಳಾಗಿರುತ್ತಾಳೆ. ಸಪ್ತಮಾತೃಕೆಗಳು ನಿಜವಾಗಿಯೂ ಅವಳದೇ ಮುಖಗಳು. ಮಾನುಷ ರುಂಡ ಮಾಲೆಯನ್ನು ಕತ್ತಿನಲ್ಲಿ ಧರಿಸಿ ಭಯಂಕರಳಾದ ಕಾಳಿಯೂ ಅವಳದೇ ಇನ್ನೊಂದು ಮುಖ. ಅವಳು ಪ್ರೀತಳಾದರೆ ಎಲ್ಲ ರೋಗಗಳೂ ಪರಿಹಾರವಾಗುತ್ತವೆ. ಪ್ರೀತಳಾಗದಿದ್ದರೆ ಅವಳು ನಮಗೆ ಪ್ರಿಯವಾದ ನಮ್ಮೆಲ್ಲ ಸಿರಿ ಸಂಪತ್ತುಗಳನ್ನೂ ನಾಶಪಡಿಸಬಹುದು. ಅವಳ ಭಕ್ತರು ಯಾವಾಗಲೂ ಸಮಸ್ತ ಕಷ್ಟಗಳಿಂದಲೂ ಮುಕ್ತರಾಗಿರುತ್ತಾರೆ. ಶಾಸ್ತ್ರಗ್ರಂಥಗಳಲ್ಲಿ ವಿವರಿಸಲ್ಪಟ್ಟ ಪರಮ ಸತ್ಯವು ಅವಳೇ.

ವಿಂಧ್ಯವಾಸಿನೀ (ವಿಂಧ್ಯಪರ್ವತದಲ್ಲಿ ವಾಸಿಸುವವಳು), ರಕ್ತದಂತಾ (ಕೆಂಪಾದ ಹಲ್ಲುಳ್ಳವಳು), ಶತಾಕ್ಷೀ (ನೂರು ಕಣ್ಣುಗಳುಳ್ಳವಳು), ಶಾಕಾಂಬರೀ (ಸಸ್ಯವರ್ಗವನ್ನು ಪೋಷಿಸುವವಳು), ದುರ್ಗಾ (ದುರ್ಗಮನೆಂಬ ಅಸುರನನ್ನು ಕೊಂದವಳು), ಭೀಮಾ (ಭಯಂಕರಳು), ಭ್ರಾಮರೀ ಅಥವಾ ಭ್ರಮರಾಂಬಾ (ದುಂಬಿಯ ರೂಪವನ್ನು ತಳೆದವಳು) ಎಂಬ ಅವಳ ಇನ್ನಿತರ ಅವತರಣಗಳನ್ನೂ ಸಹ ಕೃತಿಯು ವರ್ಣಿಸುತ್ತದೆ.

ಈ ಕೃತಿಯಲ್ಲಿ ವರ್ಣಿತವಾಗಿರುವಂತೆ ದೇವಿಯ ಮೂರು ಮುಖ್ಯವಾದ ಅವತರಣಗಳಿವೆ: ಮಹಾಕಾಳೀ, ಮಹಾಲಕ್ಷ್ಮೀ ಮತ್ತು ಮಹಾಸರಸ್ವತೀ. ಅವಳ ಈ ರೂಪಗಳನ್ನು ಪೌರಾಣಿಕ ಪಾರ್ವತೀ, ಲಕ್ಷ್ಮೀ ಮತ್ತು ಸರಸ್ವತೀ ಎಂದು ಭಾವಿಸಬಾರದು. ಅವು ತಮಸ್, ರಜಸ್, ಸತ್ವ ಎಂಬ ಮೂರು ಗುಣಗಳಿಗನುಸಾರವಾಗಿ ಮೂಡಿಬಂದಿರುವ, ಮಾಹೇಶ್ವರೀ ಎಂಬ ಒಂದೇ ಪರಮೋತ್ಕೃಷ್ಟ ಶಕ್ತಿಯ ಮೂರು ಮುಖ್ಯ ಆವಿರ್ಭಾವನಗಳು.

ಮೊದಲನೆಯದಾದ **ಮಹಾಕಾಳಿ**ಗೆ ಹತ್ತು ಮುಖಗಳು, ಹತ್ತು ಕಾಲುಗಳು. ನೀಲಮಣಿಯ ಹಾಗೆ ಅವಳು ಗಾಢನೀಲ ವರ್ಣದವಳು. ಆಭರಣಗಳಿಂದ ಅಲಂಕೃತಳಾದ ಅವಳು, ತನ್ನ ಕೈಗಳಲ್ಲಿ ಹಿಡಿದಿರುವ ವಸ್ತುಗಳೆಂದರೆ: ಖಡ್ಗ, ಚಕ್ರ, ಗದೆ, ಬಿಲ್ಲು, ಬಾಣ, ಕಬ್ಬಿಣದ ದಂಡದಂತಹ ಆಯುಧ, ಭಲ್ಲೆ, ಕವಣೆ, ಮಾನುಷ ರುಂಡ, ಮತ್ತು ಶಂಖ. ದೇವಿಯ ತಮೋಗುಣದ ಆವಿರ್ಭಾವನವಾದ ಅವಳು ವಿಷ್ಣುವಿಗೂ ವಿಶ್ರಾಂತಿಕೊಟ್ಟ



ಯೋಗನಿದ್ರೆಯೂ ಹೌದು. 'ವಿಷ್ಣುವನ್ನು ಬಿಟ್ಟುಹೋಗು ತಾಯಿ, ಅವನು ಮಧುಕೈಟಭರೆಂಬ ರಾಕ್ಷಸರನ್ನು ಕೊಲ್ಲಲಿ' ಎಂದು ಬ್ರಹ್ಮನು ಪ್ರಾರ್ಥಿಸಿದ್ದೂ ಅವಳನ್ನೇ.

ಮೂರ್ತೀಭವಿಸಿದ ಮಾಯೆಯಾದ ಅವಳು, ವಿಷ್ಣುವಿನ ನಿಗೂಢ ಶಕ್ತಿ. ಅವಳೇ ಪ್ರೀತಳಾಗಿ ನಮ್ಮನ್ನು ಬಿಟ್ಟುಹೋಗದಿದ್ದರೆ, ನಮ್ಮಲ್ಲಿರುವ ಭಗವಂತನು ಜಾಗ್ರತನಾಗಲಾರ; ನಮ್ಮನ್ನು ನುಂಗಿ ನೊಣೆಯಲೆತ್ನಿಸುತ್ತಿರುವ ಕೆಟ್ಟ ಶಕ್ತಿಗಳನ್ನು ನಾಶಪಡಿಸಲಾರ. ಮಧುಕೈಟಭರ ಕಥೆ ಸೂಚಿಸುತ್ತಿರುವುದು ಇದನ್ನೇ ಇರಬೇಕು.

ಕೃತಿಯು ದೇವಿಯ ರಜೋಗುಣದ ಮುಖವಾದ ಎರಡನೆಯ **ಮಹಾಲಕ್ಷ್ಮೀ**ಯನ್ನು ಹವಳದಂತೆ ಕೆಂಪಾಗಿರುವವಳೆಂದು ವರ್ಣಿಸುತ್ತದೆ. ತನ್ನ ಹದಿನೆಂಟು ಕೈಗಳಲ್ಲಿ ಅವಳು ಅಕ್ಷಮಾಲೆ, ಯುದ್ಧಕುಂಭ, ಬಡಿಗೆ, ಭಲ್ಲೆ, ಖಡ್ಗ, ಗುರಾಣಿ, ಶಂಖ, ಗಂಟೆ, ಮದ್ಯಪಾತ್ರೆ, ತ್ರಿಶೂಲ, ಪಾಶ, ಸುದರ್ಶನಚಕ್ರ, ಇತ್ಯಾದಿಗಳನ್ನು ಹಿಡಿದಿದ್ದಾಳೆ. ದೇವತೆಗಳೆಲ್ಲರ ಶಕ್ತಿಗಳು ಸಮ್ಮಿಳಿತವಾಗಿ ಅವರ



ಕೋಪದ ಫಲವಾಗಿ ಹುಟ್ಟಿಬಂದ ಇವಳು ಅವರೆಲ್ಲರ ಶಕ್ತಿಗಳು ಮಾತ್ರವಲ್ಲ, ಕೆಟ್ಟ ಶಕ್ತಿಗಳನ್ನು ಎದುರಿಸುವ ಅವರೆಲ್ಲರ ಇಚ್ಛೆಗಳೂ ಒಂದಾಗಿ ಮೂರ್ತೀಭವಿಸಿದವಳು. ಅದರಿಂದಾಗಿಯೇ ಅವಳನ್ನು ಯುದ್ಧವನ್ನು ಸೂಚಿಸುವ ರಕ್ತವರ್ಣದವಳಾಗಿ ತೋರಿಸಲಾಗಿದೆ. ಮಹಿಷಾಸುರನನ್ನು ಕೊಂದವಳು ಇವಳೇ.

ಮಹಿಷಾಸುರನ ಕಥೆ ಅನೇಕ ಸೂಚ್ಯಾರ್ಥಗಳಿಂದ ಕೂಡಿದೆ. ಮಹಿಷಾಸುರ (ಎಂದರೆ ಕೋಣ) ಬಲವಿರುವವನು ಮಾಡಿದ್ದೇ ಸರಿ ಎನ್ನುವ ಅರಣ್ಯನಿಯಮದ ಪ್ರತೀಕ. ಸ್ವಾರ್ಥೋದ್ದೇಶವಿರುವಲ್ಲಿ ಯಾವ ಪ್ರತಿಭಟನೆಯನ್ನೂ ಲೆಕ್ಕಿಸದ ಕ್ರೂರ ಪಾಶವೀಶಕ್ತಿ ಅವನದು. ಒಗ್ಗಟ್ಟು ಇಲ್ಲದಾಗ ದೇವತೆಗಳನ್ನು ಸಹ ಅವನು ಯಶಸ್ವಿಯಾಗಿ ಎದುರಿಸಿದನು. ಆದರೆ ದೇವತೆಗಳ ಸುಸಂಘಟಿತ ಬಲದ ಎದುರಿಗೆ, ಹೋರುವ ಪ್ರಬಲ ಇಚ್ಛೆಯ ಎದುರಿಗೆ, ಅವನು ಸೋಲಬೇಕಾಯಿತು. ಇದನ್ನೇ ದೇವಿ ಮಹಿಷಾಸುರ ಮರ್ದಿನಿ ಪ್ರತಿನಿಧಿಸುವುದು. ಸಾಮಾಜಿಕ ಸ್ತರದಲ್ಲಿ ಈ ಕಥೆಯ ನೀತಿ ವಿವರಣೆಯನ್ನು ಬೇಡದಿರುವಷ್ಟು ಸ್ಪಷ್ಟವಾಗಿದೆ. ಅದರ ಸಾಮಾಜಿಕ ಸೂಚ್ಯಾರ್ಥವನ್ನು ನಾವು ಅವಗಣಿಸುವಂತಿಲ್ಲ. ವ್ಯಷ್ಟಿ ಮಟ್ಟದಲ್ಲಿ, ಮಹಿಷಾಸುರನು ಅಜ್ಞಾನದ, ಎಗ್ಗಿಲ್ಲದ ಅಹಂಕಾರದ ಪ್ರತೀಕ. ಸಾಧಕನು ತನ್ನ ಶಕ್ತಿಗಳೆಲ್ಲವನ್ನೂ ಒಂದುಗೂಡಿಸಿ, ದೃಢವಾದ ಇಚ್ಛಾಶಕ್ತಿಯಿಂದ ಹೋರಾಡಿದರೆ ಮಾತ್ರವೇ ಅದನ್ನು ಜಯಿಸುವುದು, ಅದರ ಮೇಲೆ ಹತೋಟಿಯನ್ನು ಪಡೆಯುವುದು ಸಾಧ್ಯ. ತನ್ನ ಸಹಾಯಕ್ಕೆ ತಾನೇ ನಿಂತಿರುವವನಿಗೆ ದೇವರು ನೆರವಾಗುತ್ತಾನೆಯಾದ್ದರಿಂದ, ಅಂಥವನಿಗೆ ಭಗವಂತನ ಸಹಾಯ ಯಾವಾಗಲೂ ಇದ್ದೇ ಇರುತ್ತದೆ.

ದೇವಿಯ ಸಾತ್ವಿಕ ಮುಖವನ್ನು ಪ್ರತಿನಿಧಿಸುವ **ಮಹಾಸರಸ್ವತೀ** ಮೂರನೆಯ ದೇವತೆ. ಶರತ್ಕಾಲದ ಚಂದ್ರನಂತೆ ಪ್ರಕಾಶಿಸುವ ಅವಳು ತನ್ನ ಎಂಟು ಕೈಗಳಲ್ಲಿ ಗಂಟೆ, ತ್ರಿಶೂಲ, ನೇಗಿಲಿನ ಗುಳ, ಶಂಖ, ಕುಟ್ಟಾಣಿ, ಚಕ್ರ, ಬಿಲ್ಲು ಮತ್ತು ಬಾಣಗಳನ್ನು ಹಿಡಿದಿರುವಳು. ಪಾರ್ವತಿಯ ಭೌತಿಕ ಕವಚದಿಂದ ಹೊರಹೊಮ್ಮಿದುದರಿಂದಲೇ ಅವಳಿಗೆ ಕೌಶಿಕೀ ದುರ್ಗಾ ಎಂದು ಹೆಸರು. ಪರಿಪೂರ್ಣ ಅಂಗ ಸೌಷ್ಠವ ಹಾಗೂ ಸೌಂದರ್ಯಗಳು ಮೂರ್ತಿವೆತ್ತಂತೆ ಇರುವ ಅವಳು, ಕಾರ್ಯೋನ್ಮುಖತೆಯ, ವ್ಯವಸ್ಥೆಯ ಮತ್ತು ಸುಸಂಘಟಿತತೆಯ ಹಿಂದಿರುವ ಶಕ್ತಿ.

ಪುರಾಣಗಳಲ್ಲಿ ಮತ್ತು ಆಗಮಗಳಲ್ಲಿ ಉಕ್ತವಾಗಿರುವ ದೇವಿಯ ರೂಪಗಳಿಗಂತೂ ಲೆಕ್ಕವಿಲ್ಲ. ಉದಾಹರಣೆಗೆ, ಶೈಲಪುತ್ರೀ, ಕೂಷ್ಮಾಂಡಾ, ಕಾತ್ಯಾಯನೀ, ಕ್ಷೇಮಂಕರೀ, ಹರಸಿದ್ಧಿಃ, ವನದುರ್ಗಾ, ವಿಂಧ್ಯವಾಸಿನೀ, ಜಯದುರ್ಗಾ ಮುಂತಾದುವುಗಳು. ಅವು ಪ್ರತಿಮಾರೂಪಣೆಯಲ್ಲಿ ಹಾಗೂ ತಮ್ಮ ವಿವಿಧ ರೀತಿಯ ಅಭಿಲಾಷೆಗಳ ಪೂರೈಕೆಗಾಗಿ ದೇವಿಯ ವಿವಿಧ ರೂಪಗಳನ್ನು ಪೂಜಿಸುವ ಭಕ್ತರಿಗೆ ಹೆಚ್ಚು ಕುತೂಹಲಕಾರಿಯಾಗಿವೆ.

ದುರ್ಗೆಯ ಪ್ರತಿಮೆಗಳಿಗೆ ನಾಲ್ಕು, ಎಂಟು, ಹತ್ತು, ಹದಿನೆಂಟು, ಅಥವಾ ಇಪ್ಪತ್ತು ಕೈಗಳೂ ಇರಬಹುದು. ಕಣ್ಣುಗಳು ಮಾತ್ರ ಸಾಮಾನ್ಯವಾಗಿ ಮೂರು. ತಲೆಗೂದಲನ್ನು ಕಿರೀಟದ ಹಾಗೆ ಬಾಚಿ ಅಲಂಕರಿಸಿರುವಂತೆ ತೋರಿಸುವರು (ಕರಂಡ ಮುಕುಟ). ಅವಳಿಗೆ ಅತ್ಯಂತ ಭವ್ಯವಾದ, ಕೆಂಪಾದ ಉಡುಪಿನ ಹಾಗೂ ಆಭರಣಗಳ ಅಲಂಕಾರವನ್ನು ಮಾಡುವರು. ಕೈಗಳಲ್ಲಿ ಹಿಡಿದಿರುವ ವಸ್ತುಗಳೆಂದರೆ ಸಾಮಾನ್ಯವಾಗಿ ಶಂಖ, ಚಕ್ರ, ತ್ರಿಶೂಲ, ಬಿಲ್ಲು, ಬಾಣ, ಖಡ್ಗ, ಚೂರಿ, ಗುರಾಣಿ, ಅಕ್ಷಮಾಲೆ, ಮದ್ಯದ ಬಟ್ಟಲು ಹಾಗೂ ಗಂಟೆ. ಅವಳನ್ನು ಕಮಲದ ಮೇಲೆ ಅಥವಾ ಒಂದು ಮಹಿಷಿಯ ತಲೆಯ ಮೇಲೆ ನಿಂತಿರುವಂತೆ ತೋರಿಸಬಹುದು ಅಥವಾ ಸಿಂಹದ ಮೇಲೆ ಸವಾರಿ ಮಾಡುತ್ತಿರುವಂತೆ ತೋರಿಸಬಹುದು.

ಅವಳ ವಾಹನವಾದ ಮೃಗರಾಜ ಸಿಂಹವು ಸೃಷ್ಟಿಯ ಅತ್ಯುತ್ತಮ ಪ್ರಾಣಿಯನ್ನು ಪ್ರತಿನಿಧಿಸುತ್ತದೆ. ಆಹಾರಕ್ಕಾಗಿ ಇರುವ ಹಪಹಪಿಯನ್ನೂ, ಆ ಮೂಲಕ ವಿಷಯ ವಸ್ತುಗಳ ಮೇಲಣ ಆಸೆಯನ್ನೂ, ಅದು ಕೊನೆಗೆ ತಪ್ಪದೆ ಕಾಮಕ್ಕೆ ಕೊಂಡೊಯ್ಯುತ್ತದೆ ಎಂಬುದನ್ನೂ ಅದು ಸೂಚಿಸಬಹುದು. ದೇವತ್ವದ ಮಟ್ಟಕ್ಕೇರಬೇಕಾದರೆ ಮನುಷ್ಯನು ಪಾಶವ ಸೆಳೆತಗಳನ್ನು ಪೂರ್ಣವಾಗಿ ನಿಯಂತ್ರಣದಲ್ಲಿರಿಸಿಕೊಂಡಿರಬೇಕು – ಇದೇ ಬಹುಶಃ ದೇವಿಯನ್ನು ಸಿಂಹವಾಹಿನಿಯಾಗಿ ಚಿತ್ರಿಸಿರುವುದರ ಸಂದೇಶವಾಗಿರಬೇಕು.






# ಸ್ವಾಮಿ ಅಖಂಡಾನಂದರ ಸ್ಮೃತಿಸಂಚಯ

ಬಂಗಾಳಿ ಮೂಲ: **ಸ್ವಾಮಿ ನಿರಾಮಯಾನಂದ** ಕನ್ನಡಕ್ಕೆ: **ಕುಮಾರಿ ಪಿ.ಉಷಾ**

ಭಾಗ ೧೨

**೧೬ ಡಿಸೆಂಬರ್, ೧೯೩೬:** ಇಂದು ಆಶ್ರಮ ಜೀವನದ ಮೂಲ ನಿಯಮ-ನೀತಿಗಳಿಗೆ (principle) ಸಂಬಂಧಿಸಿದಂತೆ ಸ್ವಾಮಿ ಅಖಂಡಾನಂದರು ಅನೇಕ ವಿಚಾರಗಳನ್ನು ಹೇಳಿದರು.

''ತಟ್ಟೆಯ ಸುತ್ತ ಅರ್ಧವೃತ್ತಾಕಾರದಲ್ಲಿ ಕುಳಿತು ಎಲ್ಲರೂ ತಿನ್ನುವಾಗ ಕಡಲೆಪುರಿ ಚೆಲ್ಲಿ ಹಾಳುಮಾಡುವುದನ್ನು ನೋಡಿದ್ದೇನೆ. ಹಿಂದೆ ಒಂದು ಕಡಲೆಪುರಿ ಚೆಲ್ಲಿದರೆ, ಅವನಿಂದ ಭಿಕ್ಷಾನ್ನ ಸ್ವೀಕರಿಸುತ್ತಿರಲಿಲ್ಲ. ಭಿಕ್ಷೆಯ ವಸ್ತುವನ್ನು ಎಂದಾದರೂ ವ್ಯರ್ಥ ಮಾಡಬಹುದೆ? ಎಷ್ಟು ಕಷ್ಟಪಟ್ಟು ಜನ ಕೊಡುತ್ತಾರೆ – ಇದನ್ನು ನೆನಪಿನಲ್ಲಿಡಬೇಕು. ಅವರ ತ್ಯಾಗ ಕಡಿಮೆಯೇನಲ್ಲ.



''ನೀವಿನ್ನೂ 'ಸಿಕ್ಕಿದರೆ ತಿಂದೆ, ಇಲ್ಲದಿದ್ದರೆ ಇಲ್ಲ' ಎಂದು ಹೇಳುವ ವೇದಾಂತಿ ಪರಮಹಂಸರಾಗಿಲ್ಲ. ಹಾಗಾಗುವವರೆಗೆ ಎಲ್ಲ ವಸ್ತುಗಳನ್ನೂ ಜೋಪಾನವಾಗಿಟ್ಟುಕೊಳ್ಳಬೇಕು. ಯಾರು ತಮ್ಮ ರಕ್ತ ಸುರಿಸಿ, ಪ್ರಾಣಕೊಟ್ಟು ಒಂದು ಆಶ್ರಮ ನಿರ್ಮಿಸುತ್ತಾರೊ, ಅವರ ಮನೋಭಾವವೇ ಬೇರೆ. ನಿರ್ಮಾಣ ಮಾಡುವುದು ಬಹಳ ಕಷ್ಟ. ಅದಕ್ಕೆಷ್ಟು ಪುರುಷಪ್ರಯತ್ನ ಬೇಕು! ಈಗ ಹಣ ದೊರತಿದೆ. ಅದಕ್ಕೇ, ನಾವಾಗಿ ಹಣ ತರುವ ಸಾಮರ್ಥ್ಯವಿಲ್ಲ, ದೂರ ಪ್ರದೇಶಗಳಿಂದ 'ಭಕ್ತರು' ಕಳುಹಿಸುತ್ತಾರೆ! ಇನ್ನು ಕಲ್ಲಿದ್ದಲು ಉರಿಸುವುದೇಕೆ? ಮೊದಲು (ನಾನೊಬ್ಬನೇ ಇದ್ದಾಗ) ಏನು ಮಾಡುತ್ತಿದ್ದೆ ಗೊತ್ತೆ? ಸುತ್ತುಮುತ್ತಲಿನ ಜಮೀನುಗಳಿಂದ ಒಣಗಿದ ಸೌದೆ, ಬಿದಿರು, ಸೆಗಣಿಯನ್ನಾರಿಸಿ ಒಟ್ಟುಮಾಡುತ್ತಿದ್ದೆ. ಸಂಜೆ ಎಲ್ಲರೂ ಹೋಗಿ ಅದನ್ನು ತೆಗೆದುಕೊಂಡು ಬರಬೇಕು. ಅನಂತರ ಡಿಸ್ಟ್ರಿಕ್ಟ್ ಬೋರ್ಡಿನವರು ದೂರದ ಹಳ್ಳಿಯಲ್ಲಿ ಒಂದು ಮರವನ್ನು ಒಂದು ರೂಪಾಯಿಗೆ ಮಾರಿದರು. ಒಬ್ಬ ಮರ ಕಡಿಯುವವನನ್ನು ಕರೆಸಿ ಅದನ್ನು ಕಡಿಸಿದೆ, ಬಳಿಕ ಗಾಡಿಯಲ್ಲಿ ತೆಗೆದುಕೊಂಡು ಬಂದೆ. ಚಿಕ್ಕ ಪುಟ್ಟ ತುಂಡುಗಳನ್ನು ಗೋಣಿ ಚೀಲದಲ್ಲಿ ಹಾಕಿಕೊಂಡು ತಂದೆ. ಅದರಿಂದ ಅಡಿಗೆ ಮಾಡಿದ ಮೇಲೆ 'ಬಾಬು'ಗಳು ಊಟ ಮಾಡಿದರು.

''ನಾನು ಎರಡು ವರ್ಷ ಇಲ್ಲಿರಲಿಲ್ಲ. ಆ ಬಳಿಕ ಬಂದು ನೋಡಿದರೆ 'ಬಾಬು'ಗಳು ಗಾಡಿಗಟ್ಟಲೆ ಕಲ್ಲಿದ್ದಲು ಸಂಗ್ರಹಿಸಿ ಇಟ್ಟಿದ್ದಾರೆ.ಇನ್ನಾವ ಕಷ್ಟವೂ ಇಲ್ಲ! ಆಶ್ರಮದಲ್ಲಿ ಹಸುಗಳಿವೆ, ಆದರೂ ಬೆರಣಿ ಕೊಂಡುಕೊಳ್ಳುತ್ತಿದ್ದಾರೆ. ಆಶ್ರಮದ ಜಮೀನಿನಲ್ಲಿ ಬಿದ್ದಿರುವ ಸೆಗಣಿಯನ್ನು ಹೊರಗಿನ ಜನ ತೆಗೆದುಕೊಂಡು ಹೋಗುತ್ತಿದ್ದಾರೆ. ಅದು ಒಣಗಿ, ಭೂಮಿ ಗಲೀಜಾಗುತ್ತಿದೆ. ಇದರಕಡೆ ಯಾರಿಗೂ ಗಮನವಿಲ್ಲ. ಎಲ್ಲ ಸಾಧು-ಬ್ರಹ್ಮಚಾರಿಗಳು ಈ ಕ್ಷುಲ್ಲಕ ವಿಷಯಗಳಿಗೆ ಹೇಗೆ ಗಮನ ಕೊಟ್ಟಾರು, ಹೇಳು?

''ಕಲ್ಲಿದ್ದಲಿನ ಬೆಂಕಿಯಲ್ಲಿ ಅಡುಗೆ ಮಾಡಿ ತಿಂದರೆ ವಾಯು ಉಪದ್ರವ ಉಂಟಾಗುತ್ತದೆ ಎಂದು ಸ್ವಾಮೀಜಿ ಹೇಳುತ್ತಿದ್ದರು. ಅದರಲ್ಲಿ ಅಡುಗೆ ಬೇಗನೆ ಆಗುತ್ತದೆ, ಆದರೆ ಅನ್ನ ಬೇಯುವುದಿಲ್ಲ. ಸೌದೆ ಬೆಂಕಿಯ ಅಡುಗೆಯಿಂದ ಆರೋಗ್ಯ ಚೆನ್ನಾಗಿರುತ್ತದೆ. ನೇಕಾರರು, ಸಂತಾಲರನ್ನು ನೋಡಿಲ್ಲವೆ? ಬೆರಣಿಯ ಬೆಂಕಿಯಲ್ಲಿ ಮಾಡಿದ ಅಡುಗೆಯೂ ಸಹಜವಾಗಿ ಜೀರ್ಣವಾಗುತ್ತದೆ, ಅದರಲ್ಲಿ ಬೇಯುವುದು ನಿಧಾನ ಅಷ್ಟೆ. ಹಳೆಯ ಕಾಲದವರು ಕಲ್ಲಿದ್ದಲಿನಿಂದ ಬೇಯಿಸಿದ ಅಡಿಗೆಯನ್ನು ಊಟ ಮಾಡುತ್ತಿರಲಿಲ್ಲ ಎಂಬುದರ ಹಿಂದಿನ principle ಇದೇ ಆಗಿತ್ತು. Principle (ತತ್ತ್ವ) ಹಿಡಿದು ಜೀವಿಸಬೇಕಾದರೆ ಅದಕ್ಕೆ ಪ್ರಯತ್ನ ಬೇಕು. ಆದರಾಯಿತು, ಇಲ್ಲದಿದ್ದರೆ ಇಲ್ಲ – ಎಂದಿದ್ದರಾಗದು. Principle ಎತ್ತಿ ಹಿಡಿಯಲು ಬಹಳಷ್ಟು ತ್ಯಾಗ ಮಾಡಬೇಕು.

''ಸ್ವಾಮೀಜಿ, ಸ್ವಾಮೀಜಿ ಎನ್ನುತ್ತೀರಿ. ಸ್ವಾಮೀಜಿ ಒಂದು principleನ ಸಾಕಾರಮೂರ್ತಿ. ಅವರು ರಕ್ತ-ಮಾಂಸಗಳಿಂದ ಕೂಡಿದವರಲ್ಲ. ಅವರು idea (ಭಾವನೆ) ಗಳಿಂದ ನಿರ್ಮಿತರಾದವರು. ರಾಧೆಯ ಬಗ್ಗೆ ಅವರು ಹೇಳುತ್ತಿದ್ದರು: 'Radha was not of flesh and blood. She was a froth in the Ocean of Love' (ರಾಧೆ ರಕ್ತಮಾಂಸಗಳಿಂದ ನಿರ್ಮಿತಳಾದವಳಲ್ಲ, ಅವಳು ಪ್ರೇಮಸಮುದ್ರದ ಮೇಲಿನ ಒಂದು ನೊರೆ) ಅದೇ ರೀತಿ ಸ್ವಾಮೀಜಿಯೂ ರಕ್ತಮಾಂಸದಿಂದ ನಿರ್ಮಿತರಾದವರಲ್ಲ. ಅವರು ಒಂದು ಭಾವನೆಯೇ ಮೈದಾಳಿದಂತಿದ್ದರು. Principle ಅನ್ನುವುದು ಪ್ರಚಂಡವಾದುದ್ದು. ಅದಕ್ಕಾಗಿ ಎಲ್ಲವನ್ನೂ ತ್ಯಾಗ ಮಾಡಬೇಕು. ತತ್ತ್ವವೇ ಆದರ್ಶ.

‘‘ಸ್ವರೂಪಾನಂದರನ್ನು ನೋಡು, ಸ್ವಾಮೀಜಿಯ ಆದರ್ಶ ದಂತೆ ಮಾಯಾವತಿ (ಅದ್ವೈತ ಆಶ್ರಮ, ಮಾಯಾವತಿ, ಉತ್ತರಾ ಖಂಡ ರಾಜ್ಯ)ಯಲ್ಲಿ ಯಾವುದೇ ಉತ್ಸವ, ಪೂಜೆ, ಆರತಿಗಳೂ ನಡೆಯಬಾರದೆಂದು principle (ನಿಯಮ) ಮಾಡಿದರು. ಅದಕ್ಕಾಗಿ ಅವರು ಎಷ್ಟೊಂದು ಅಡಚಣೆಗಳನ್ನು ಸಹಿಸಬೇಕಾ ಯಿತು! ಈ ವಿಷಯದಲ್ಲಿ ‘ಗುರುವಿಗಿಂತ ಶಿಷ್ಯನೇ ಸಮರ್ಥ.’ ಆ ಶಿಷ್ಯ ಕಾಲವಾದ – ಅವನ ಆದರ್ಶದಂತೆಯೇ ಈಗಲೂ ಅಲ್ಲಿ ಕೆಲಸಗಳು ನಡೆಯುತ್ತಿವೆ.’’

**೧೭ ಡಿಸಂಬರ್, ೧೯೩೬ :** ಸ್ವಾಮಿ ಅಖಂಡಾನಂದರಿಗೆ ಧನಗೋಪಾಲ ಮುಖ್ಯೋಪಾಧ್ಯಾಯನ ಮೇಲೆ ಸ್ನೇಹಪೂರ್ಣ ಭಾವನೆಯಿತ್ತು. ಅವರ ಈ ಭಾವನೆ ಕೆಲವೊಮ್ಮೆ ಪ್ರಕಟವಾಗು ತ್ತಿತ್ತು. ಕಳೆದ ಜುಲೈ ತಿಂಗಳಲ್ಲಿ ಅವನ ಸಾವಿನ ಸುದ್ದಿಯನ್ನು ಕೇಳಿ ಮಹಾರಾಜರು ಹೇಳಲಾರದಷ್ಟು ದುಃಖಿತರಾಗಿದ್ದರು. ಅವನ ಮರಣಾನಂತರ ಮಹಾರಾಜರಿಗೆ ಅವನ ಪತ್ರ ತಲುಪಿತು. ಅದ ರಲ್ಲಿ ಬರೆದಿತ್ತು: ‘ಊರಿಗೆ ಹೋದ ಮೇಲೆ ಶ್ರೀಮಾತೆಯವರ ಜೀವನ ಚರಿತ್ರೆಯನ್ನು ಬರೆದು ಜಗತ್ತಿಗೆ ಉಡುಗೊರೆ ನೀಡು ತ್ತೇನೆ.’ ಪ್ರತಿವಾರವೂ ಅಂಚೆ ಮೂಲಕ ಧನಗೋಪಾಲ ಮುಖ್ಯೋ ಪಾಧ್ಯಾಯನ ಪತ್ರ ಬರುತ್ತಿತ್ತು. ಸೊಟ್ಟಸೊಟ್ಟಗೆ, ದೊಡ್ಡ ಬಂಗಾಳೀ ಅಕ್ಷರದಲ್ಲಿ ಬರೆದ ಪತ್ರಗಳಲ್ಲಿ ಕ್ರಮಸಂಖ್ಯೆ ಬರೆದಿರುತ್ತಿತ್ತು. ೨–೩ ಕಂತುಗಳಲ್ಲಿ ಒಂದು ಪತ್ರ ಕೊನೆಗೊಳ್ಳುತ್ತಿತ್ತು. ಅವರು ತಮ್ಮ ಪುಸ್ತಕಗಳನ್ನೆಲ್ಲ ಆಶ್ರಮದ ಗ್ರಂಥಾಲಯಕ್ಕೆ ಕಳುಹಿಸಿದ್ದರು.

ಆಕಸ್ಮಿಕವಾಗಿ ಇಂದು ಅವರ ವಿಷಯ ಬಂದಿದೆ. ಬಾಬಾ ಹೇಳಿದರು: ‘‘ಧನಗೋಪಾಲನ ಭಾಷೆಗೆ ಅವರು (ಅಮೆರಿಕನ್ನರು) sparkling style (ಮಿನುಗು ರಚನಾ ಶೈಲಿ) ಎನ್ನುತ್ತಾರೆ. ಆ ದೇಶದಲ್ಲಿ ಅವನ ಮಾತುಗಳನ್ನು ಜನ ಕೇಳುತ್ತಾರೆ, ಪ್ರಶಂಸೆ ಮಾಡುತ್ತಾರೆ. ಅವನ ಪುಸ್ತಕಗಳನ್ನು ಎಲ್ಲರೂ ಓದುತ್ತಾರೆ. ಇದೇನು ಕಡಿಮೆಯೆ? ಅವನು ಅಲ್ಲಿಗೆ ಹೋದಾಗ ಯಾವ ಸ್ಥಿತಿ ಯಲ್ಲಿದ್ದ, ನಂತರ ಎಷ್ಟು ಕೀರ್ತಿಯನ್ನು ಹೊಂದಿದ! ಬಹಳ ಕಷ್ಟದ ಜೀವನ, ಹೋರಾಟ ಮಾಡಿ ಮೇಲಕ್ಕೆ ಬಂದ. ಠಾಕೂರರ ಮೇಲೆ ಅವನಿಗೆ ಎಂಥ ವಿಶ್ವಾಸ! ಶ್ರೀಮಾತೆಯವರ ವಿಷಯವಾಗಿ ಅವನು ಬರೆಯುವುದು ‘ಶರಣಾಗತ! ಶರಣಾಗತ!’ ಎಂದು ಮಾತ್ರ. ಪತ್ರಗಳ ತುಂಬ ‘ಶರಣಾಗತ!’ ನಾನು ಅವನಿಗೆ ಬಂಗಾಳಿಯಲ್ಲಿ ಬರೆಯಲು ಪ್ರೇರೇಪಿಸಿದೆ. ಅಣ್ಣ (ಸ್ವಾಮಿ ಶಿವಾ ನಂದರು) ಅಸ್ವಸ್ಥರಾಗಿದ್ದಾಗ ಬಂದಿದ್ದ, ಹೋಗುವಾಗ ‘ಹೋದ ಕೂಡಲೆ ಪತ್ರ ಬರೆಯುತ್ತೇನೆ’ ಎಂದ. ನಾನು, ‘ಬರೆ, ಆದರೆ ಬಂಗಾಳಿಯಲ್ಲಿ ಬರೆಯಬೇಕು’ ಎಂದೆ. ಅವನು ಒಂದು ಬಟ್ಟೆ ಕೇಳಿದ, ಆದರೆ ರೇಶ್ಮೆಯದು ಬೇಡವೆಂದ. ನೀವು ಧರಿಸುವಂತಹ ಖಾದಿ ವಸ್ತ್ರ ಬೇಕು ಎಂದ. ಸಕ್ಕರೆ ಪ್ರಸಾದವನ್ನು ತೆಗೆದುಕೊಂಡು ಹೋದ, ಸ್ವಲ್ಪ ಸ್ವಲ್ಪವೇ ತಿನ್ನುತ್ತಿದ್ದ.’’

* * *

ಮತ್ತೆ principle ವಿಷಯ ಬಂತು. ‘‘ಹಸುಗಳನ್ನು ಸಾಕ ಬೇಕು, ಆದರೆ ಯಾರೂ ಸೇವೆ ಮಾಡಲಾರರು. ನಾಯಿಗೆ ಸಮ ಯಕ್ಕೆ ಸರಿಯಾಗಿ ಆಹಾರ ಕೊಡಬೇಕು, ಅದನ್ನು ಕೂಡ ಯಾರೂ ಮಾಡುತ್ತಿರಲಿಲ್ಲ. ಕೆಲವರು ಸರದಿ ಪ್ರಕಾರ ಕೊಡುತ್ತಿದ್ದರು. ಅವರು ಅಷ್ಟೊಂದು ಮಂದಿ ಇದ್ದರೂ, ಅವರಲ್ಲಿ ಯಾರೊಬ್ಬನೂ ಮುಂದೆ ಬಂದು ‘ಇದನ್ನು ನಾನು ಮಾಡುತ್ತೇನೆ’ ಅಂತ ಹೇಳ ಲಿಲ್ಲ. ಮನಸ್ಸು ಅಷ್ಟು ಗಟ್ಟಿಯಿಲ್ಲ.

‘‘ನನ್ನೊಡನೆ ೮–೧೦ ವರ್ಷಗಳಿದ್ದು, ನಾನು ಸ್ವಲ್ಪ ದೂರ ಹೋದರೆ ಮುಗಿಯಿತು! ನಾನಿಲ್ಲಿ ಸ್ವಲ್ಪ ದಿನಗಳು ಇಲ್ಲದಿದ್ದರೆ ನನ್ನ principle (ನೀತಿ ನಿಯಮ) ಬಿಟ್ಟುಬಿಡುವುದೆ? ಇನ್ನು ನಾನಿಲ್ಲದಿದ್ದರೆ ಏನಾಗುವುದೋ ತಿಳಿದೇ ಇರುವಿರಿ. ಎಲ್ಲೆಡೆ ಇದೇ ಸ್ಥಿತಿ. Principleನ್ನು ಎತ್ತಿ ಹಿಡಿಯುವುದೆಂದರೆ ಸುಲಭವೆ? ಅದಕ್ಕೆ ಬಹಳಷ್ಟು ತ್ಯಾಗ, ತಪಸ್ಸು ಬೇಕು.

‘‘ಸ್ವಾಮೀಜಿಯನ್ನು patriot saint (ದೇಶಪ್ರೇಮಿ ಸಂನ್ಯಾಸಿ) ಎನ್ನುತ್ತಾರೆ. Patriot ಆಗುವುದು ಸುಲಭವೆ? ದೇಶಾತ್ಮ ಬೋಧೆ! ಅವರಂತೆ feel (ಭಾವಿಸು) ಮಾಡುತ್ತಿರುವವರನ್ನಾಗಲಿ, ಮಾಡಿಸುತ್ತಿರುವವರನ್ನಾಗಲಿ ನಾನು ನೋಡಿಲ್ಲ. ಅವರ ಕೈಯಿಂದ ಅಚ್ಚಾದ ಮಿಷನ್ನಿನ ಮೂಲ ಕಾರ್ಯಕರ್ತರು ನಾವಲ್ಲವೆ? ನಮ್ಮ ಮಾತನ್ನಾದರೂ ಯಾರು ಕೇಳುತ್ತಾರೆ? ಉನ್ನತ idea (ಭಾವ) ವನ್ನು ಹೊತ್ತುಕೊಂಡು ಹುಟ್ಟಿದವರೇ ಹೆದರುತ್ತಾರೆ. ಹೆಸರು ಕೀರ್ತಿಯ ಬಯಕೆ ಅತಿಘೋರವಾದದ್ದು. ನಾವು ಸಂನ್ಯಾಸಿಗಳು, ಹೆಸರು, ಕೀರ್ತಿಗಳು ನಮ್ಮ ಪಾಲಿಗೆ ಹಕ್ಕಿಯ ಹಿಕ್ಕೆಯಂತೆ!

‘‘ಕೆಲಸ ಮಾಡುವುದು ಸುಲಭವೆ? ದೊಡ್ಡ ತಪ್ಪು ಮಾಡಿದೆ ಅಂತ ಹೇಳುವುದೂ ಇಲ್ಲ, ಅದನ್ನು ಒಪ್ಪುವುದೂ ಇಲ್ಲ. ಎಂದಾ ದರೂ ಇತರರ ಮೂಲಕ ಅದು ಹೊರಬಿದ್ದರೆ ಅದನ್ನು ಒಪ್ಪುವು ದಿಲ್ಲ. ನಾವು ಹೇಗಿದ್ದೆವು ಗೊತ್ತೆ? ಏನಾದರೂ ತಪ್ಪು ಮಾಡಿದರೆ, ಎಲ್ಲರಿಗಿಂತ ಮೊದಲು ನಾವೇ ಹೋಗಿ ‘ಇಂಥ ತಪ್ಪನ್ನು ಮಾಡಿ ದ್ದೇನೆ’ ಎಂದು ಹೇಳಿಬಿಡುತ್ತಿದ್ದೆವು. ಸ್ವಾಮೀಜಿ ಪಶ್ಚಿಮದಿಂದ ಭಾರತಕ್ಕೆ ಹಿಂದಿರುಗುತ್ತಿದ್ದರು. ಗುರುಭಾಯಿಗಳೊಬ್ಬರು ಸ್ವಾಮೀಜಿ ಯವರನ್ನು ಕಂಡು, ತಮ್ಮ ದೋಷವನ್ನು ಇತರರು ಹೇಳುವುದಕ್ಕೆ ಮೊದಲು ತಾವಾಗಿಯೇ ಹೇಳಬೇಕೆಂದು ಸಿಲೋನಿಗೆ ಹೋಗಿದ್ದರು.

‘‘ನಾನೊಮ್ಮೆ ಡಾರ್ಜಿಲಿಂಗ್‌ನಿಂದ ವಾಪಸ್ಸು ಬರುತ್ತಿದ್ದೆ. ಸ್ಟೇಷನ್ನಿನಿಂದ ಗಾಡಿ ಹೊರಡುವ ಮುನ್ನ ಹುಡುಗನೊಬ್ಬ ನನ್ನ ಗಾಡಿಗೆ ಧುಮುಕಿದ. ಅವನು ಅನಾಥನಿರಬೇಕೆಂದು ಭಾವಿಸಿ ಅವನನ್ನು ನನ್ನೊಂದಿಗೆ ಕರೆದುಕೊಂಡು ಬರುತ್ತಿದ್ದೆ. ಸಿಲಿಗುರಿ ಯಲ್ಲಿ ಅವನಿಗೆ ತಂದೆ ಇದ್ದಾನೆಂದು ತಿಳಿದಾಗ, ತಕ್ಷಣ ಪೋಲಿಸ ರಿಗೆ ಎಲ್ಲವನ್ನೂ ತಿಳಿಸಿ, ಅವನನ್ನು ಅವರಿಗೊಪ್ಪಿಸಿದೆ. ಇತ್ತ ಕ್ಷಾಮದ ಪರಿಹಾರಕಾರ್ಯದ ನಂತರ ಗೆಜೆಟ್ ಸುತ್ತೋಲೆ ಹೊರ ಡಿಸಿದ್ದರು, ಹುಡುಗ ನಮ್ಮ ಹತ್ತಿರ ಬಂದಿದ್ದಿರಬಹುದು ಎಂದು.

ಹುಡುಗನ ತಂದೆಯಿಂದ ಸ್ವಾಮೀಜಿಗೆ, 'ನಿಮ್ಮವರು ನನ್ನ ಹುಡುಗನನ್ನು ಹಿಡಿದುಕೊಂಡು ಹೋಗಿದ್ದಾರೆ' ಎಂದು ಟೆಲಿಗ್ರಾಂ ಬಂದಿದೆಯಂದು, ಕಲ್ಕತ್ತೆಗೆ ಬಂದಾಗ ನನಗೆ ತಿಳಿಯಿತು. ನಾನು ಸ್ವಾಮೀಜಿಯನ್ನು ಭೇಟಿಯಾಗಲು 'ಶ್ರೀಮಾತೆಯವರ ಮನೆ'ಗೆ (ಬೋಸ್‌ಪಾರಾದ ಬಾಡಿಗೆ ಮನೆ) ಹೋದೆ. ಅಂದು ಅವರು ಅಲ್ಲಿಗೆ ಬರುವವರಿದ್ದರು. ನನ್ನನ್ನು ಕಾಣುತ್ತಲೇ ಸ್ವಾಮೀಜಿ ಮೃದುವಾಗಿ ನಗುತ್ತ ತಿರಸ್ಕಾರದಿಂದ, 'ಅನಾಥ ಹುಡುಗನಿಗಾಗಿ ಅಷ್ಟೊಂದು ಲಾಲಸೆಯೆ?' ಎಂದರು. ನಾನು ವಿಷಯವನ್ನೆಲ್ಲ ಮುಚ್ಚುಮರೆಯಿಲ್ಲದೆ ಹೇಳಿದಾಗ ಅವರು ಸಂತೋಷಗೊಂಡರು.

''ನಿಜವಾದ ಸಂನ್ಯಾಸಿಯಾಗುವುದು ಸುಲಭದ ಮಾತೆ? ಸಂನ್ಯಾಸಿಯಾಗುವ ಮುನ್ನ ಎಷ್ಟು ಸಾಧನೆ, ತಪಸ್ಸು ಮಾಡಿದ್ದೇವೆ! ಕಠೋರ ಹಸಿವು, ಬಾಯಾರಿಕೆ, ಶೀತ, ಉಷ್ಣವನ್ನು ಸಹಿಸುವುದು, ನಿಂದೆ, ಸ್ತುತಿ ಎರಡೂ ಒಂದೇ ಎನ್ನುವುದು – ಇದೇನು ಸುಲಭವೆ? ನಾನೊಬ್ಬನೇ ಮೌನವಾಗಿ ಗಂಭೀರಭಾವದಿಂದ ಚಿಂತನೆ ಮಾಡಿದೆ: ಮುಖಕ್ಕೆ ಒಂದೆಡೆ ಶ್ರೀಗಂಧ, ಇನ್ನೊಂದೆಡೆ ಮಲ ಎಸೆಯುತ್ತಾರೆ. ಯಾರೋ ಹೂಮಾಲೆಯನ್ನು ಹಾಕಿ ಆದರಿಸುತ್ತಾರೆ, ಅನಂತರ ಇನ್ನೊಬ್ಬ ಅಪಮಾನ ಮಾಡುತ್ತಾನೆ. ಹೊಡೆಯುತ್ತಾನೆ, ಮೈಮೇಲೆ ಕೊಳೆಯನ್ನು ಎರಚುತ್ತಾನೆ, ಓಡಿಸುತ್ತಾನೆ. ನಾನು ಎಲ್ಲ ಅವಸ್ಥೆಗಳಲ್ಲೂ ಸ್ಥಿರವಾಗಿದ್ದೇನೆ.

''ಈ ಕ್ಷಣ ಮರುಭೂಮಿಯಲ್ಲಿ ನಡೆಯುತ್ತಿದ್ದೇನೆ, ಮರುಕ್ಷಣ ತುಷಾರಾವೃತ ಪರ್ವತಶಿಖರಗಳು! ಇವೆಲ್ಲ ನಮ್ಮ ಧ್ಯಾನದ ವಿಷಯಗಳಾಗಿದ್ದವು. ಯಾರಿಗೆ ಹೇಳುತ್ತಿದ್ದೇನೆ, ಯಾರು ಕೇಳುತ್ತಿದ್ದಾರೆ? ಎಲ್ಲರೂ ಮೈಗಳ್ಳರು, ಕೆಲಸದಿಂದ ಜಾರಲು ನೋಡುತ್ತಾರೆ. ಯಾರು ಎಷ್ಟು ದುಡಿಯುತ್ತಾರೋ ಅವರಿಗೆ ಅಷ್ಟೇ ಲಭಿಸುವುದು. ಕೆಲಸ ಮಾಡದ ಮೈಗಳ್ಳನಿಗೆ ಸಿಗುವುದೂ ಶೂನ್ಯವೆ!

''ಪ್ರತಿದಿನ ಮಲಗುವಾಗ ಇವತ್ತು ಏನು ಮಾಡಿದೆ, ಎಷ್ಟು ಬಾರಿ ಭಗವಂತನನ್ನು ಕರೆದೆ, ಯಾರ ಮನಸ್ಸಿಗೂ ನೋವುಂಟು ಮಾಡಿಲ್ಲ ತಾನೆ – ಎಂದೆಲ್ಲ ಆಲೋಚಿಸುವುದು ಒಳ್ಳೆಯದು. ಇನ್ನಷ್ಟು ಪ್ರಾರ್ಥನೆ, ಪಾರಾಯಣ ಮಾಡಬೇಕು. ಜಪ ಹಾಗೂ ಪ್ರಾರ್ಥನೆ. ಧ್ಯಾನ ಬಹಳ ದೂರದ ಮಾತು. ಕೆಲಸಕ್ಕೆ ಹೆದರಿ ಧ್ಯಾನಕ್ಕೆ ಕುಳಿತವನಿಗೆ ನೊಗ ಕಟ್ಟಬೇಕೆಂದು ಸ್ವಾಮೀಜಿ ಹೇಳುತ್ತಿದ್ದರು. ನಾನಾದರೋ ಗುದ್ದಲಿ ಕೊಟ್ಟು ಮಣ್ಣು ಅಗೆಯಲು ಹೇಳುತ್ತೇನೆ.

ಭಕ್ತಿ ನೀಡು, ವಿಶ್ವಾಸ ನೀಡು, ದರ್ಶನ ನೀಡು ಎಂದು ಯಾವಾಗಲೂ ಜಪ, ಪ್ರಾರ್ಥನೆ ಮಾಡಬೇಕು. ಕೇವಲ ಜಪದಿಂದೇನು ಪ್ರಯೋಜನ? 'ಮಾಲಾ ಜಪೇ ಸಾಲಾ, ಕರ ಜಪೇ ಭಾಯಿ, ಮನೇ ಮನೇ ಜಪೋ ತಬೇ ಬಲಿಹಾರೀ ಜಾಯಿ ॥' *(ಅಧಮನು ಜಪಮಾಲೆಯಲ್ಲಿ ನಾಮಜಪ ಮಾಡುತ್ತಾನೆ. ಮಧ್ಯಮನು ಕರಜಪ ಮಾಡುತ್ತಾನೆ. ಉತ್ತಮನು ಮಾನಸಿಕ ಜಪ ಮಾಡುತ್ತಾನೆ, ಅದರಿಂದ ಭಗವದ್ದರ್ಶನವುಂಟಾಗುತ್ತದೆ.)*

* * *

**೧೮ನೇ ಡಿಸೆಂಬರ್, ೧೯೩೬:** ಆಶ್ರಮದ ಒಬ್ಬ ಬ್ರಹ್ಮಚಾರಿ ತನಗೆ ಬಹಳ ಕೆಲಸವಿದೆ, ಬಿಡುವೇ ಇಲ್ಲ, ಬಾಬಾ ಬಳಿ ಬಂದು ಕುಳಿತುಕೊಳ್ಳಲು ಸಮಯ ಸಿಗುವುದಿಲ್ಲ; ಠಾಕೂರ ಮಂದಿರದಲ್ಲಿ ತನಗೆ ಸಹಾಯಕರಾರೂ ಇಲ್ಲ, ಎಂದೆಲ್ಲ ಹೇಳಿದ. ಬಾಬಾ ಅವನಿಗೆಂದರು: ''ಯಾವಾಗಲೂ ಕೆಲಸ ಮಾಡು. ಕೆಲಸದ ಒತ್ತಡದಿಂದ ನನ್ನ ಬಳಿಗೆ ಯಾರಿಗಾದರೂ ಬರಲಾಗುತ್ತಿಲ್ಲ, ನನ್ನ ಬಳಿ ಕುಳಿತುಕೊಳ್ಳಲಾಗುತ್ತಿಲ್ಲ ಎಂದರೆ ನನಗೆ ಸಂತೋಷವೇ. ಯಾರು ತುಂಬ ಕೆಲಸ ಮಾಡುತ್ತಾರೋ ಅಥವಾ ಯಾವುದಾದರೂ ಕೆಲಸದ ನಿಮಿತ್ತ ಕಷ್ಟಪಟ್ಟುಕೊಂಡು ದೂರ ಎಲ್ಲಿಗಾದರೂ ಹೋಗಿದ್ದರೆ, ನನ್ನ ಮನಸ್ಸು ಅವನ ಹತ್ತಿರವೇ ಇರುತ್ತದೆ. ಕೆಲಸ ಮಾಡು. ನಿನ್ನದಿನ್ನೂ ಕೆಲಸ ಮಾಡುವ ವಯಸ್ಸು. ಚಿಕ್ಕ ವಯಸ್ಸಿನಲ್ಲಿ ನಾನೂ ಕೆಲಸ ಮಾಡಿದ್ದೇನೆ. ಈಗ ಪರಾವಲಂಬಿಯಾಗಿದ್ದೇನೆ, ನೋಡುತ್ತಿದ್ದೀಯಲ್ಲ.

''ಇನ್ನು ಪೂಜೆಯೆ? ಪೂಜೆ ಮಾತ್ರ, ಇನ್ನೇನು ಕೆಲಸವಿದೆ? ಅದನ್ನೂ ಹೆಚ್ಚು ಮಾಡಿ ಲಾಭವಿಲ್ಲ. ನಾನು ವಿಧಿವತ್ತಾಗಿ ಪೂಜೆ ಮಾಡುತ್ತಿದ್ದೆ. ಒಂದೊಂದು ಕೃಷ್ಣಕಲಿ (ಸಂಜೆಮಲ್ಲಿಗೆ) ಹೂವನ್ನರ್ಪಿಸಲು ೫ ನಿಮಿಷ ತಗಲುತ್ತಿತ್ತು. ಇತ್ತ ಠಾಕೂರರ ಎದುರು ತಿನಿಸುಗಳೆಲ್ಲ ತಯಾರಾಗಿರುತ್ತಿದ್ದವು, ಆದರೆ ಠಾಕೂರರಿಗೆ ನೈವೇದ್ಯವಾಗಿಲ್ಲ. ನನಗೆ ಅದರ ಕಡೆ ಗಮನವೇ ಇಲ್ಲ. ಪೂಜೆಗೆ ಸಂಬಂಧಿಸಿದ ಎಲ್ಲ ಕೆಲಸವೂ ಪೂಜೆಯೇ; ಕೋಣೆ ಗುಡಿಸಬೇಕು, ಒರೆಸಬೇಕು, ಪಾತ್ರೆಗಳನ್ನು ತೊಳೆಯಬೇಕು. ಹೂಗಳನ್ನು ಕೊಯ್ದು ಅಣಿಮಾಡಬೇಕು, ಹಣ್ಣು ಕತ್ತರಿಸಬೇಕು – ಎಲ್ಲ ಕಾರ್ಯಗಳನ್ನೂ ಪೂಜಾಭಾವದಿಂದಲೇ ಮಾಡಬೇಕು. ಜೊತೆಗೆ ಇಷ್ಟಮಂತ್ರದ ಜಪ ಮಾಡಬೇಕು, ಇಷ್ಟದೇವತೆಯ ಚಿಂತನೆ ಮಾಡಬೇಕು.

''ಅನಂತರ ಪೂಜೆ? ಬೊಗಸೆ ಬೊಗಸೆ ಪುಷ್ಪಾಂಜಲಿಯನ್ನು ಹಿಡಿದು, 'ಇದನ್ನು ಸ್ವೀಕರಿಸಿ ಪ್ರಭು, ಹೂವನ್ನು ಸ್ವೀಕರಿಸಿ!' ಎನ್ನುತ್ತಾ ಅರ್ಪಿಸಬೇಕು. ಚಂದನವನ್ನು ಹಚ್ಚಿ , ಹೂವಿನ ಹಾರ ಇದ್ದರೆ ಅದನ್ನು ತೊಡಿಸಬೇಕು – ಚಿತ್ರಪಟದ ಬಳಿ ಅಲಂಕರಿಸಬೇಕು. ಬೇರೆ ಯಾವ ಚಿತ್ರಗಳಿವೆ – ಅವೆಲ್ಲವಕ್ಕೂ ಒಂದೆರಡು ಹೂಗಳನ್ನಿಡಬೇಕು. ನಂತರ ಠಾಕೂರರಿಗೆ ನೈವೇದ್ಯ ಮಾಡಬೇಕು. ನಿವೇದಿಸುವಾಗ, 'ಸೇವಿಸಿ ಪ್ರಭು, ಇದೇ ನಿಮ್ಮ ಊಟ–ತಿಂಡಿ. ಇಂದೇನು ಸಿಕ್ಕಿದೆಯೋ ಅದನ್ನೇ ನೀಡುತ್ತಿದ್ದೇನೆ. ತಿನ್ನಿ , ಠಾಕೂರ್' ಎಂದು ಹೇಳಿ, ಬಾಗಿಲನ್ನು ಮುಚ್ಚಿ ಹೊರಗೆ ಬಂದು ಸ್ವಲ್ಪಹೊತ್ತು ಜಪ ಮಾಡಬೇಕು. ಆಗ ಠಾಕೂರರು ತಿನ್ನುತ್ತಿದ್ದಾರೆಂದು ಭಾವಿಸಬೇಕು. ಇದೇ ಪೂಜೆ. ಬಾಣಲಿಂಗದಲ್ಲೇ ಎಲ್ಲ ದೇವದೇವತೆಗಳ ಪೂಜೆಯನ್ನು ಬಹಳ ಸರಳವಾಗಿ ಮಾಡಬಹುದು ಎಂದು ಶರತ್ ಮಹಾರಾಜರು ಹೇಳುತ್ತಿದ್ದರು.''

೨೫.೧೨.೧೯೬೬: ಸಂಧ್ಯಾರತಿಯ ನಂತರ ಎಲ್ಲರೂ ಒಬ್ಬೊಬ್ಬರಾಗಿ ಬಾಬಾ ಬಳಿಗೆ ಬರಲಾರಂಭಿಸಿದರು. ಸ್ವಾಮಿ ಅಖಂಡಾನಂದರು ಸೂರದಾಸರ ಕೆಲವು ಭಜನೆಗಳನ್ನು ಆಯ್ದು ಅವುಗಳ ಅರ್ಥವನ್ನು ವಿವರಿಸಿದರು.

೧. **ಕಹಾ ಜಾಯಿಯೇ ಝುಟಕಾರಕೋ**
**ನಿಬಲ ಜಾನ್ ತೂಹೀ ಮೋಯ್,**
**ಹೃದಯ ಸೇ ಝುಟಕಾರಕೋ ತೋ**
**ಸಬಲ ಮೈ ಜಾನೀ ತೋಯ್ ।**

(ಶಕ್ತಿಹೀನ, ನಿರ್ಬಲ ಎಂದೆಣಿಸಿ ನನ್ನನ್ನು ನೀನು ತ್ಯಜಿಸಬಹುದು. ಆದರೆ ನನ್ನ ಹೃದಯವನ್ನು ಬಿಟ್ಟು ಹೋಗಲು ನಿನಗೆ ಸಾಧ್ಯವಾದರೆ ನಿಜವಾಗಿಯೂ ನೀನು ಶಕ್ತನೆಂದೇ ತಿಳಿಯುವೆ.)

೨. **ಪ್ರಭು ಮೇರಾ ಅವಗುಣ ಚಿತ್ ನ ಧರೋ**
**ಸಮದರ್ಶೀ ಹೈ ನಾಮ್ ತಿಹಾರೋ ।**

(ಪ್ರಭುವೇ, ನೀನು ನನ್ನ ಅವಗುಣಗಳನ್ನು ಎಣಿಸದಿರು. ಸಮದರ್ಶಿಯೆಂದಿಹುದು ನಿನ್ನ ಬಿರುದು...)

೩. **ಗುರುಧ್ಯಾನ ಗುರುಜ್ಞಾನ**
**ಗುರು ಬಿನ ನಹೀ ಬಾಟ್, ಕೋಡಿ ಬಿನ ನಾಹೀ ಹಾಟ್**

(ಗುರುವನ್ನು ಧ್ಯಾನಿಸಿ ಗುರುವಿನ ಜ್ಞಾನವನ್ನು ಪಡೆಯಬೇಕು. ಹಣವಿಲ್ಲದೆ ಮಾರುಕಟ್ಟೆಯಲ್ಲಿ ಹೇಗೆ ವಸ್ತುಗಳನ್ನು ಕೊಳ್ಳಲಾಗದೋ, ಅಂತೆಯೇ ಗುರುವಿಲ್ಲದೆ ಪಥದ ಅರಿವಾಗದು.)

ಬಳಿಕ ವೇದಾಂತಕ್ಕೆ ಸಂಬಂಧಿಸಿದ ಹಲವು ಮಾತುಗಳನ್ನು ಹೇಳಿದರು: ''ಹಿಂದಿಯಲ್ಲಿ ಸುಂದರದಾಸ, ನಿಶ್ಚಲದಾಸರು ಎಷ್ಟು ಚೆನ್ನಾಗಿ ವಿಚಾರ ಮಾಡಿದ್ದಾರೆ! 'ವೃತ್ತಿಪ್ರಭಾಕರ,' 'ವಿಚಾರ ಸಾಗರ' ಮುಂತಾದ ಗ್ರಂಥಗಳು ಅದ್ವೈತಪರವಾದವು. 'ವೃತ್ತಿ'ಯಲ್ಲಿ 'ಅಹಂ ಬ್ರಹ್ಮಾಸ್ಮಿ'ಯ ವಿಚಾರವಿದೆ. ಪಶ್ಚಿಮಭಾರತದಲ್ಲಿ ಇವೆಲ್ಲ ಬಹಳ ಪ್ರಚಲಿತವಾಗಿದೆ. ಪಂಜಾಬೀ ಮಹಿಳೆಯರೂ ಇದನ್ನೆಲ್ಲಾ ಓದುತ್ತಾರೆ, ಚೆನ್ನಾಗಿ ವಿಚಾರ ಮಾಡುತ್ತಾರೆ. 'ವಿವೇಕ ಚೂಡಾಮಣಿ'ಯಲ್ಲಿ ಶಂಕರರು ಉಪದೇಶ ನೀಡುತ್ತಿದ್ದಾರೆ, ಶಿಷ್ಯನಿಗೆ ಅನುಭವ ಪ್ರಾಪ್ತಿಯಾಗಿ ಅವನು ಹೇಳುತ್ತಾನೆ: **'ಕ್ವ ಗತಂ ಕೇನ ವಾ ನೀತಂ ಕುತ್ರ ಲೀನಮಿದಂ ಜಗತ್?'** ಈಗತಾನೆ ನೋಡುತ್ತಿದ್ದ ವಿಚಿತ್ರ ಜಗತ್ತು ಎಲ್ಲಿ ಹೋಯಿತು? ಯಾರು ತೆಗೆದುಕೊಂಡು ಹೋದರು? ಸತ್-ಚಿತ್-ಆನಂದ ಎಲ್ಲೆಲ್ಲೂ - ನಿನ್ನಲ್ಲಿ, ನನ್ನಲ್ಲಿ, ಕುರ್ಚಿಯಲ್ಲಿ; ಸರ್ವರೊಳಗೂ ಅಸ್ತಿ, ಭಾತಿ, ಪ್ರಿಯ. ಮಲ ಯಾರಿಗೆ ಪ್ರಿಯವೆಂದು ಯೋಚಿಸುತ್ತಿದ್ದೀಯಾ? ಅದು ನಾಯಿಗೆ ಪ್ರಿಯ, ಕ್ರಿಮಿಗೆ ಪ್ರಿಯ. Eternal existance - common to all. (ಅನಂತ ಅಸ್ತಿತ್ವ, ಎಲ್ಲದರಲ್ಲೂ ಅದು ಸಮಾನ.)

**ಅಸ್ತಿ ಭಾತಿ ಪ್ರಿಯಂ ರೂಪಂ ನಾಮ ಚೇತ್ಯಂಶಪಂಚಕಮ್।**
**ಆದ್ಯತ್ರಯಂ ಬ್ರಹ್ಮರೂಪಂ ಜಗದ್ರೂಪಂ ತತೋ ದ್ವಯಂ॥**
*(ದೃಗ್‌ದೃಶ್ಯ ವಿವೇಕ)*

ಬ್ರಹ್ಮಜ್ಞಾನವೇನು ಸುಲಭವಾಗಿ ಲಭಿಸುವುದೆ? ಬ್ರಹ್ಮವಿಚಾರ ಸುಲಭವಲ್ಲ. ಸಾಧನಚತುಷ್ಟಯಗಳನ್ನು ಅಭ್ಯಾಸ ಮಾಡಬೇಕು. ಅವು ಯಾವುವು? ವಿವೇಕ, ವೈರಾಗ್ಯ, ಶಮಾದಿಷಟ್‌ಸಂಪತ್ತಿ, ಮುಮುಕ್ಷುತ್ವ. **ವಿವೇಕ :** ನಿತ್ಯಾನಿತ್ಯ ವಸ್ತುಗಳ ವಿಚಾರ. ಬ್ರಹ್ಮ ಸತ್ಯ, ಜಗತ್ ಮಿಥ್ಯಾ - ಹೀಗೆ. **ವೈರಾಗ್ಯ:** ಇಹಾಮುತ್ರಫಲಭೋಗ ವಿರಾಗ. ಸ್ವರ್ಗ, ಮರ್ತ್ಯ ಎರಡರದೂ ಭೋಗವಾಸನಾ ತ್ಯಾಗ. ಚಿನ್ನದ ಸರಪಳಿ, ಕಬ್ಬಿಣದ ಸರಪಳಿ ಇವೆರಡೂ ಬಂಧನವೇ. **ಷಟ್‌ಸಂಪತ್ತಿ:** 'ಶಮ' - ಮನಸ್ಸಿನ ಸಂಯಮ. 'ದಮ' - ಶರೀರ, ಇಂದ್ರಿಯಾದಿಗಳ ಸಂಯಮ. 'ತಿತಿಕ್ಷಾ' ಎಂದರೆ ಸಹಿಸುವುದು. ಶೀತ, ಗ್ರೀಷ್ಮ, ಸುಖ, ದುಃಖ ಇವೆಲ್ಲ ದ್ವಂದ್ವಗಳು, ಅದರ ಅನುಭವವೇ 'ಮಾತ್ರಾಸ್ಪರ್ಶ'. 'ಉಪರತಿ' ಎಂದರೆ ಕಿವಿಯ ಕೇಳುವಿಕೆ, ಜಿಹ್ವದ ಆಸ್ವಾದನೆ, ಮೂಗಿನ ಘ್ರಾಣ, ಚರ್ಮದ ಸ್ಪರ್ಶ - ಇವುಗಳಿಂದ ಉಪರತಿ. ಠಾಕೂರರ ಮಾತುಗಳಲ್ಲಿ ಹೇಳುವುದಾದರೆ 'ಪಥವನ್ನು ತಿರುಗಿಸುವುದು.' ಶ್ರದ್ಧಾ: ಗುರುವಾಕ್ಯ, ವೇದಾಂತವಾಕ್ಯದಲ್ಲಿ ವಿಶ್ವಾಸವೇ ಶ್ರದ್ಧೆ. ನಂತರ 'ಸಮಾಧಾನ' - ಅಂದರೆ ಶಾಂತಿ. **ಮುಮುಕ್ಷುತ್ವ:** ಮುಕ್ತಿಯ ಇಚ್ಛೆ, ಮುಕ್ತಿ ಪಡೆಯಬೇಕೆಂಬ ತೀವ್ರವಾದ ಆಸೆ. ಆಗಲೇ ನಿಃಶ್ರೇಯಸ್ಸು. ಇವನ್ನೆಲ್ಲಾ ಸುಲಭವಾಗಿ ಪಡೆಯಲಾಗುವುದೇನು? ನಿಮಗೆಲ್ಲಾ ಠಾಕೂರರ ಆಶ್ರಯವು ದೊರಕಿರುವಾಗ ಇವನ್ನೆಲ್ಲ ಮಾಡಬೇಕು. ಆಗ ತಾನೆ ವಸ್ತುಲಾಭವಾಗುವುದು?

''ನನಗೆ (ಮಾತನಾಡಲು) ಕಷ್ಟವಾಗುತ್ತಿದ್ದರೂ ಸಹ, ಯಾರಿಗಾದರೂ ಉಪಯೋಗವಾದರೆ ಆಗಲಿ ಎಂದು ಹೇಳುತ್ತಿದ್ದೇನೆ. ಇಲ್ಲವಾದರೆ ಹೇಳುವುದಾದರೂ ಯಾರಿಗೆ, ಯಾರು ತಾನೆ ಕೇಳುತ್ತಾರೆ? ಸಾಧನ ಚತುಷ್ಟಯಗಳನ್ನು ಆಚರಿಸದವರೂ, ಗೃಹಸ್ಥರೂ ಬ್ರಹ್ಮವಿಚಾರವನ್ನು ಮಾಡಬಹುದು. ಅದರಿಂದ ಒಳಿತೇ ಆಗುತ್ತದೆ, ಒಂದು ಉತ್ತಮ ಭಾವನೆಯಾದರೂ ಮನಸ್ಸಿನಲ್ಲಿ ಏಳುತ್ತದೆ ಎಂದು ಶಂಕರರು ಹೇಳಿದ್ದಾರೆ. ಸಾಧುಗಳಿಗೆ ಭಿಕ್ಷೆ ನೀಡುತ್ತಾರೆ ಎಂದಿಟ್ಟುಕೊಳ್ಳಿ. ಇದರಿಂದ ಗೃಹಸ್ಥರಿಗೇ ಕಲ್ಯಾಣವಾಗುವುದು; ಸಾಧುಗಳನ್ನು ನೋಡಿದಾಗ ವೈರಾಗ್ಯಭಾವ ಜಾಗೃತವಾಗಿ, ಕೆಲವು ಕ್ಷಣಗಳಾದರೂ ಭಗವಂತನನ್ನು ಸ್ಮರಿಸುತ್ತಾರೆ. ಸಂನ್ಯಾಸಿ ಅನೇಕರ ಮನೆಬಾಗಿಲಿಗೆ ಹೋಗಿ ಭಿಕ್ಷೆ ಬೇಡಲು ನಾಚುವುದಿಲ್ಲ. ಶಿವನು ಅನ್ನಪೂರ್ಣೆಯ ಬಳಿಗೆ ಹೋಗಿ ಭಿಕ್ಷೆ ಬೇಡುತ್ತಾನೆ. ಅವನಿಗೆ ನಾಚಿಕೆಯೇನು? ಸರ್ವತ್ಯಾಗಿಯಾದ ಶಿವನಿಗೇಕೆ ಲಜ್ಜೆ? ಸಾಧುವನ್ನು ನೋಡಿದಾಗ ಉನ್ನತ ಭಾವಗಳ - ತ್ಯಾಗ, ವೈರಾಗ್ಯ, ಈಶ್ವರನಿರ್ಭರತೆಗಳ ಉದ್ದೀಪನವಾಗುತ್ತದೆ. ಬಂಗಾಳದಲ್ಲಿ ಇವುಗಳೆಲ್ಲ (ವೇದಾಂತ ಹಾಗೂ ಸಂನ್ಯಾಸಧರ್ಮ) ಇದ್ದವೇನು? ಅದಿರಲಿ, ಅವುಗಳ ಬಗ್ಗೆ ನಿಕೃಷ್ಟ ಭಾವನೆಯೇ ಇತ್ತು. ಇದನ್ನೆಲ್ಲ ಜಾರಿಗೆ ತಂದದ್ದು ನಾವೇ ಅಲ್ಲವೆ?

*(ಮುಂದುವರಿಯುವುದು)*

# ಶ್ರೀ ತ್ಯಾಗರಾಜರ ಕೀರ್ತನೆಗಳಲ್ಲಿ ನವವಿಧ ಭಕ್ತಿ

**- ಶಶಿಕಲಾ ಶ್ರೀಧರ್**

ನಾದೋಪಾಸನೆಯ ಮೂಲಕ ಭಗವತ್ಕೃಪೆಗೆ ಪಾತ್ರರಾದ, ಕರ್ನಾಟಕ ಸಂಗೀತದ ತ್ರಿಮೂರ್ತಿಗಳಲ್ಲಿ ಒಬ್ಬರಾದ ಸಂತ ತ್ಯಾಗರಾಜರ ಜೀವನ, ಕೃತಿಗಳಲ್ಲಿ ಭಕ್ತಿಯ ಎಲ್ಲ ಲಕ್ಷಣಗಳೂ ಕಂಡು ಬರುತ್ತವೆ. ಇದನ್ನು ವಿಶದವಾಗಿ ವಿವರಿಸುವ ಲೇಖಕಿ ಸಂಗೀತ, ಸಂಸ್ಕೃತಗಳಲ್ಲಿ ವಿಶೇಷ ಪರಿಣತಿ ಹೊಂದಿದ್ದಾರೆ. ಅವರು ಬೆಂಗಳೂರು ರಾಮಕೃಷ್ಣ ಮಠದ ಭಕ್ತರು.



**ಪ**ರಮಾತ್ಮನಲ್ಲಿ ಅತಿಶಯವಾದ ಪ್ರೇಮವೇ ಭಕ್ತಿ. ಪೂರ್ಣಾನುರಾಗದಿಂದ ಭಗವಂತನಲ್ಲಿ ಮನಸ್ಸನ್ನು ಸ್ಥಿರವಾಗಿ ನಿಲ್ಲಿಸಿ ಅವನನ್ನು ಸೇವಿಸುವುದೇ ಭಕ್ತಿ. ಕಲಿಯುಗಕ್ಕೆ ಸರಳ ಸುಲಭ ಮಾರ್ಗವೇ ಭಕ್ತಿಮಾರ್ಗ. ಈ ಮಾರ್ಗವನ್ನನುಸರಿಸುವ ಭಕ್ತನು ಸರಳವಾದ ಪೂಜೆ, ನಾಮಸ್ಮರಣೆ, ಸಂಕೀರ್ತನೆ, ಜಪಧ್ಯಾನಾದಿಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುತ್ತಾನೆ. ಹೇಗೆ ರೋಗಿಯಾದವನಿಗೆ ಔಷಧಿಯೊಡನೆ ಪಥ್ಯವೂ ಮುಖ್ಯವೋ, ಅದೇ ರೀತಿ ಭವ ರೋಗ ನಿವಾರಣೆಗೆ 'ಭಕ್ತಿ' ಎಂಬ ಔಷಧಿಯೊಡನೆ ಸದ್ಗುಣ ಸದಾಚಾರವೆಂಬ ಪಥ್ಯವೂ ಅತ್ಯಂತ ಆವಶ್ಯಕ. ಭಗವಂತನಲ್ಲಿ ಇಂತಹ ಅತ್ಯುತ್ಕಟ ಅನುರಾಗ ಉದಿಸಬೇಕಾದರೆ ಅದು ಅವನ ಕರುಣೆಯಿಂದ ಮಾತ್ರ ಸಾಧ್ಯ.

ಭಾಗವತ ಶಿರೋಮಣಿ ಬಾಲ ಪ್ರಹ್ಲಾದನು ಗುರುಕುಲದಲ್ಲಿ ಅಧ್ಯಯನ ಮುಗಿಸಿ ಅರಮನೆಗೆ ಹಿಂದಿರುಗಿದಾಗ, ತಂದೆ ಹಿರಣ್ಯಕಶಿಪು ತನ್ನ ಕಂದನನ್ನು ಪ್ರೀತಿಯಿಂದ ಬಳಿಗೆ ಕರೆದು, ''ಮಗು, ಗುರುಕುಲದಲ್ಲಿ ಇಷ್ಟು ದಿನ ನೀನು ಗುರುಗಳಿಂದ ಏನು ಕಲಿತಿರುವೆಯೋ, ಅದರಲ್ಲಿ ಉತ್ತಮವಾದ ಯಾವುದಾದರೊಂದು ಮಾತನ್ನು ಹೇಳು ನೋಡೋಣ'' ಎಂದಾಗ ಭಕ್ತ ಪ್ರಹ್ಲಾದ -

**ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ ॥**
**ಇತಿ ಪುಂಸಾರ್ಪಿತಾ ವಿಷ್ಣೌ ಭಕ್ತಿಶ್ಚೇನ್ನವ ಲಕ್ಷಣಾ**
**ಕ್ರಿಯತೇ ಭಗವತ್ಯದ್ಧಾ ತನ್ಮನ್ಯೇಽಧೀತಮುತ್ತಮಮ್ ॥**

*(ಭಾಗವತ, ೭.೫.೨೩-೨೪)*

''ತೀರ್ಥರೂಪರೇ, ಶ್ರೀ ಭಗವಂತನಾದ ವಿಷ್ಣುವಿನ ಗುಣಗಳನ್ನೂ, ನಾಮಗಳನ್ನೂ ಶ್ರದ್ಧೆಯಿಂದ ಕೇಳುವುದು, ಸಂಕೀರ್ತನೆ, ನಾಮರೂಪಾದಿಗಳ ಸ್ಮರಣೆ, ಪಾದಸೇವನೆ, ಪೂಜೆ, ಅರ್ಚನೆ, ಭಕ್ತಿಯಿಂದ ನಮಸ್ಕರಿಸುವುದು, ದಾಸನಾಗಿ ಕೈಂಕರ್ಯ ಮಾಡುವುದು, ಸ್ನೇಹಿತನಂತೆ ಪ್ರೀತಿಸುವುದು ಮತ್ತು ಕಡೆಯದಾಗಿ ತನ್ನನ್ನೇ ಸಂಪೂರ್ಣವಾಗಿ ಸಮರ್ಪಿಸಿಕೊಳ್ಳುವ ಆತ್ಮನಿವೇದನೆ - ಎಂಬೀ ಒಂಬತ್ತು ಬಗೆಯಲ್ಲಿ ಭಗವಂತನಿಗೆ ಭಕ್ತಿಭಾವವನ್ನು ಸಮರ್ಪಣೆ ಮಾಡುವುದು - ಇದು ಅತ್ಯುತ್ತಮವಾದ ಅಧ್ಯಯನವೆಂದು ತಿಳಿಯುತ್ತೇನೆ'' ಎಂದು ಉತ್ತರಿಸುತ್ತಾನೆ.

ಮೂಲತಃ ಭಕ್ತಿಯು ಒಂದೇ ಆದರೂ ಅದು ವಿವಿಧ ಭಕ್ತರಲ್ಲಿ ವಿವಿಧ ಬಗೆಯಲ್ಲಿ ಅಭಿವ್ಯಕ್ತಗೊಳ್ಳುವುದನ್ನು ಕಾಣುತ್ತೇವೆ. ಭಾಗವತದಲ್ಲಿ ಇದನ್ನು ಪ್ರಮುಖವಾದ ಒಂಬತ್ತು ವಿಧಾನಗಳಲ್ಲಿ ವರ್ಣಿಸಿರುವುದನ್ನು ಈಗಾಗಲೇ ಸ್ಮರಿಸಿದ್ದೇವೆ. ಗಾನಯೋಗಿ ಶ್ರೀ ತ್ಯಾಗರಾಜರು ತಮ್ಮ ಭಕ್ತಿಭರಿತ ಕೃತಿಗಳಲ್ಲಿ ಈ ಒಂಬತ್ತೂ ಬಗೆಯ ಭಕ್ತಿರೂಪಗಳನ್ನು ಸುಂದರವಾಗಿ ಕೊಂಡಾಡಿದ್ದಾರೆ. ಈ ನವವಿಧ ಭಕ್ತಿಭರಿತ ಕೀರ್ತನೆಗಳಲ್ಲಿ ಕೆಲವು ಕೀರ್ತನೆಗಳನ್ನು ಉತ್ತಮ ಉದಾಹರಣೆಗಳ ರೂಪದಲ್ಲಿ ಆಯ್ದು, ಒಂದೊಂದು ಭಕ್ತಿಯ ಪ್ರಕಾರಗಳನ್ನು ಚಿಂತಿಸೋಣ.

**೧. ಶ್ರವಣ ಭಕ್ತಿ :** ಆ ದೇವದೇವನ ಲೀಲೆ, ಮಹಿಮೆ, ನಾಮ, ರೂಪ, ಗುಣಗಳನ್ನು ಪರಮಭಾಗವತರು ಭಕ್ತಿ ತುಂಬಿ ವರ್ಣಿಸುವುದನ್ನು ಅತ್ಯಂತ ನಿಷ್ಠೆಯಿಂದ ಕೇಳುತ್ತ, ಹೃದಯದಲ್ಲಿ ಭಕ್ತಿ ತುಂಬಿ ಆನಂದಿಸುವುದೇ **ಶ್ರವಣ ಭಕ್ತಿ**ಯ ಸ್ವರೂಪ.



ಗಾನಯೋಗಿ ತ್ಯಾಗರಾಜರು ಮಧ್ಯಮಾವತಿ ರಾಗದಲ್ಲಿ 'ರಾಮಕಥಾಸುಧಾರಸ' ಎಂಬ ಕೀರ್ತನೆಯನ್ನು ಭಕ್ತಿ ತುಂಬಿ ಹಾಡುತ್ತಾ, ಅಲ್ಲಿ ಶ್ರವಣಭಕ್ತಿಯ ಸ್ವರೂಪವನ್ನು ನಿರೂಪಿಸಿದ್ದಾರೆ:

**ರಾಮಕಥಾಸುಧಾರಸ ಪಾನಮೊಕ**
**ರಾಜ್ಯಮು ಜೇಸುನೇ ॥**

**ಭಾಮಾಮಣಿ ಜಾನಕಿ ಸೌಮಿತ್ರಿ**
**ಭರತಾದುಲತೋ ಭೂಮಿ ವೆಲಯು ಸೀತಾ ॥**

**ಧರ್ಮಾದ್ಯಖಿಲ ಫಲದಮೆ ಮನಸಾ**
**ಧೈರ್ಯಾನಂದ ಸೌಖ್ಯ ನಿಕೇತನಮೇ**
**ಕರ್ಮಬಂಧ ಜ್ವಲನಾಬ್ಧಿ ನಾವಮೇ**
**ಕಲಿಹರಮೇ ತ್ಯಾಗರಾಜವಿನುತುಡಗು ॥**

'ಶ್ರೀರಾಮ ಚರಿತ್ರೆಯೆಂಬ ಅಮೃತರಸದ ಆಸ್ವಾದನವು ಒಂದು ರಾಜ್ಯವನ್ನೇ ಕೊಡುತ್ತದೆಯಲ್ಲವೆ? ಸ್ತ್ರೀರತ್ನಳಾದ ಜನಕಸುತೆ ಸೀತೆ, ಲಕ್ಷ್ಮಣ, ಭರತಾದಿಗಳೊಡನೆ ಪ್ರಕಾಶಿಸುತ್ತಿರುವ ಶ್ರೀರಾಮನ ಕಥೆ ಮೋಕ್ಷಸಾಮ್ರಾಜ್ಯವನ್ನೇ ಕೊಡುತ್ತದೆ. ಎಲೈ ಮನಸ್ಸೇ, ಇದು ಧರ್ಮವೇ ಮೊದಲಾದ ಎಲ್ಲಾ ಸಾಧನೋಪಕರಣವಾದ ಪುರುಷಾರ್ಥಗಳನ್ನು ಕೊಡುತ್ತದೆ. ಸ್ಥಿರತೆ, ಸಂತೋಷ, ಸುಖಗಳ ತೌರು ಮನೆಯಾದ, ಕರ್ಮದ ಕಟ್ಟೆಂಬ ಉತ್ಕಟ ಸಮುದ್ರಕ್ಕೆ ತೆಪ್ಪವಾದ, ಪಾಪಪರಿಹಾರಕವಾದ ತ್ಯಾಗರಾಜನಿಂದ ಸ್ತುತಿಸಲ್ಪಟ್ಟ ಶ್ರೀರಾಮನ ಚರಿತ್ರೆ ಎಂಬ ಅಮೃತಪಾನವು ಒಂದು ರಾಜ್ಯವನ್ನೇ ಕೊಡುತ್ತದೆ.'

**'ಸುಧಾ ಮಾಧುರ್ಯ ಭಾಷಣ'** ಎಂಬ ತಮ್ಮ ಮತ್ತೊಂದು ಕೃತಿಯಲ್ಲಿ ಶ್ರೀ ತ್ಯಾಗರಾಜರು ಶ್ರವಣಭಕ್ತಿಯನ್ನು ಕೀರ್ತಿಸಿದ್ದಾರೆ. ಬಹುಕಾಲದಿಂದ ಶ್ರೀರಾಮನ ಕಥಾಮೃತದಿಂದ ತಮ್ಮ ಹಸಿವನ್ನು ತೀರಿಸಿಕೊಳ್ಳುತ್ತಿರುವುದಾಗಿಯೂ, ದುರ್ಜನರ ಸಂಗದಿಂದ ದೂರ ವಿದ್ದು ಸಜ್ಜನರ ಸಂಗ ಮಾಡುತ್ತಿರುವುದಾಗಿಯೂ ಹೇಳುತ್ತಾ, ಅವನ ಚರಿತ್ರೆಯನ್ನು ಕೀರ್ತಿಸಿ ತೃಪ್ತಿಪಡುವ ತನಗೆ ದರ್ಶನವಿತ್ತು, ತನ್ನೊಡನೆ ಅಮೃತಸಮಾನವಾದ ಮಧುರ ಮಾತುಗಳನ್ನಾಡಬೇಕೆಂದು ಪ್ರಾರ್ಥಿಸುತ್ತಾರೆ.

ಭಗವಂತನ ಅನಂತಗುಣಗಳನ್ನಾಗಲೀ, ಚೆಲುವನ್ನಾಗಲೀ, ನಾಮಗಳನ್ನಾಗಲೀ ಅಥವಾ ಭಗವದ್ಭಕ್ತರ ಜೀವನವನ್ನಾಗಲೀ ಮತ್ತೆ ಮತ್ತೆ ಆಲಿಸುವುದೇ ಶ್ರವಣಭಕ್ತಿ. ಈ ಅದ್ಭುತವೂ ಅಮೃತಮಯವೂ ಆದ ಹರಿಯ ಲೀಲೆಗಳನ್ನು ಕೇಳುವುದರಿಂದ ಅವನ ನಾಮರೂಪಗಳು ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದು ಸಾಧನೆಗೆ ಪೋಷಕವಾಗುತ್ತದೆ. ಅದು ಧೈರ್ಯ ಆನಂದ ಮತ್ತು ಸುಖಗಳ ತವರು. ಎಲ್ಲ ಪುರುಷಾರ್ಥಗಳನ್ನು ಕರುಣಿಸುವಂತಹುದು.

**೨. ಕೀರ್ತನಭಕ್ತಿ:** ಭಗವಂತನ ನಾಮರೂಪಗುಣ ಲೀಲೆಗಳನ್ನು ಪ್ರೇಮದಿಂದ ಉಚ್ಚರಿಸುತ್ತಾ ಅವುಗಳನ್ನು ಹಾಡಿ ನಲಿಯುವುದೇ ಕೀರ್ತನಭಕ್ತಿ. ಶರೀರದಲ್ಲಿ ರೋಮಾಂಚನ, ಗದ್ಗದ ಕಂಠ, ಅಶ್ರುಧಾರೆ, ಪ್ರಫುಲ್ಲತೆಗಳಿಂದ ಹಾಡುತ್ತಾ ದಿವ್ಯಾನುಭವವನ್ನು ಪಡೆಯುವುದೇ ಕೀರ್ತನ ಭಕ್ತಿಯ ಸ್ವರೂಪ.



ಕೃತಯುಗದಲ್ಲಿ ಧ್ಯಾನ-ತಪಸ್ಸು, ತ್ರೇತಾಯುಗದಲ್ಲಿ ಯಜ್ಞಯಾಗಾದಿಗಳು ಹಾಗೂ ದ್ವಾಪರಯುಗದಲ್ಲಿ ಅರ್ಚನೆ ಇವುಗಳಿಂದ ಯಾವ ಫಲವನ್ನು ಗಳಿಸುತ್ತಿದ್ದರೋ ಅದೇ ಫಲವನ್ನು ಕಲಿಯುಗದಲ್ಲಿ ಕೇವಲ ಹರಿನಾಮಕೀರ್ತನೆಯಿಂದಲೇ ಪಡೆಯಬಹುದು. ಭಗವನ್ನಾಮಕೀರ್ತನೆಯಿಂದ ಚಿತ್ತಶುದ್ಧಿಯಾಗುವುದು. ಅದು ಭಗವತ್ಪ್ರಾಪ್ತಿಗೆ ಸುಲಭಸೋಪಾನವಾಗುವುದು.

ಇಂತಹ ಕೀರ್ತನಭಕ್ತಿಯ ಸಾಕಾರರೂಪ ಶ್ರೀ ತ್ಯಾಗರಾಜರು. ಅವರು ರಚಿಸಿ ಹಾಡಿದ ಈ ಸುಂದರ ಕೀರ್ತನೆಯನ್ನು ಸ್ಮರಿಸೋಣ:

**ಭಜನ ಸೇಯರಾದಾ? ರಾಮ ।**
**ಅಜರುದ್ರಾದುಲಕು ಸತತಮಾತ್ಮಮಂತ್ರಮೈನ ರಾಮ ॥**

**ಕರಕು ಬಂಗಾರು ವಲ್ವ ಕಟಿನೆಂತೋ ಮೆರಯಗ**
**ಚಿರು ನವ್ವುಲು ಗಲ ಮೊಗಮುನು ಚಿಂತಿಂಚಿ ।**

**ಅರುಣಾಭಾಧರಮುನು ಸುರುಚಿರ ದಂತಾವಳಿನಿ**
**ಮೆರಯು ಕಪೋಲಯುಗಮುನು**
**ನಿರತಮುನನು ದಲಚಿ ದಲಚಿ ।**

**ಬಾಗುಗ ಮಾನಸ ಭವಸಾಗರಮುನನು ತರಿಂಪ**
**ತ್ಯಾಗರಾಜ ಮನವಿನಿ ವಿನಿ ತಾರಕಮಗು ರಾಮನಾಮ ।**

'ಬ್ರಹ್ಮರುದ್ರಾದಿಗಳು ಸತತವಾಗಿ ಜಪಮಾಡುತ್ತಿರುವ ಮಂತ್ರವಾದ ರಾಮನಾಮಭಜನೆಯನ್ನು ಮಾಡಬಾರದೆ? ಸ್ವರ್ಣಮಯವಾದ ಉಡುಪಿನಿಂದ ಅಲಂಕೃತನಾದ, ಮಂದಹಾಸದಿಂದ

ಕೂಡಿದ ಮುಖಾರವಿಂದವುಳ್ಳ, ಮೊಲ್ಲೆಮೊಗ್ಗುಗಳಂತೆ ಸುಂದರವಾದ ದಂತಪಂಕ್ತಿಯುಳ್ಳ ಶ್ರೀರಾಮನ ಭಜನೆಯನ್ನು ಭವಸಾಗರವನ್ನು ದಾಟಿಸುವ ರಾಮನಾಮದಿಂದ ಮಾಡಬಾರದೆ?'

ಶ್ರೀ ತ್ಯಾಗರಾಜರು ಶ್ರೀರಾಮನನ್ನು ನಾನಾವಿಧಗಳಿಂದ ಹಾಡಿ ಹೊಗಳುವುದು ಮಾತ್ರವಲ್ಲದೆ, ನಿಂದಾಸ್ತುತಿಗಳ ಮೂಲಕವೂ ಬಹುವಿಧವಾಗಿ ಅವನನ್ನು ಪ್ರಶ್ನಿಸುತ್ತಾರೆ. ಇಂತಹ ಕೀರ್ತನ ವೈವಿಧ್ಯ ಸಾರಸ್ವತಲೋಕದಲ್ಲಿ ಮಾತ್ರವಲ್ಲ, ಶ್ರೀರಾಮಚಂದ್ರನಿಗೂ ಆನಂದದಾಯಕ. ತಮ್ಮ '**ಸುಗುಣಮುಲೇ**' ಎಂಬ ಚಕ್ರವಾಕರಾಗದ ಕೃತಿಯುಲ್ಲಿ ಕೀರ್ತನ ಭಕ್ತಿಯನ್ನು ಕುರಿತು ಹೀಗೆ ಹಾಡುತ್ತಾರೆ:

'ಓ ರಘುರಾಮ! ನಿನ್ನ ಕಪಟವರಿಯದೆ ನೀನೇ ಇಲ್ಲಿಗೆ ಬರುವೆಯೆಂದು ನಂಬಿ ನಿನ್ನ ಗುಣನಾಮಕೀರ್ತನೆಗಳನ್ನು ಎಡೆಬಿಡದೆ ಮಾಡುತ್ತಾ ಬಂದಿದ್ದೇನೆ. ಕರ್ಮಗಳು, ವೇದಾಧ್ಯಯನ ಅಥವಾ ಧ್ಯಾನವನ್ನು ನಾನರಿಯೆ. ಶ್ರೀನಾಯಕನೇ, ನನ್ನನ್ನು ಕ್ಷಮಿಸು.'

'**ಏಲಾವತಾರಮೆತ್ತುಕೊಂಟಿವಿ**' ಎಂಬ ತಮ್ಮ ಮತ್ತೊಂದು ಕೃತಿಯಲ್ಲಿ ತಾವು ರಚಿಸಿದ ಶತರಾಗಮಾಲಿಕೆಯನ್ನು ಒಪ್ಪಿಸಿಕೊಂಡು ವರ ಕೊಡುವುದಕ್ಕಾಗಿ ಶ್ರೀರಾಮನಾಗಿ ಅವತರಿಸಿದೆಯಾ ಎಂದು ಭಕ್ತಿತುಂಬಿ ರಾಮನನ್ನು ಪ್ರಶ್ನಿಸುತ್ತಾರೆ.

ಆದ್ದರಿಂದ ಪರಮಾತ್ಮನ ಕೃಪೆಗಾಗಿ ನಿರಂತರ ಅವನನ್ನು ಭಜಿಸಿ ಕೃತಾರ್ಥರಾಗಬೇಕು. ಇತರರನ್ನು ಮೆಚ್ಚಿಸುವುದಕ್ಕಾಗಲೀ, ಧನ-ಕನಕಾದಿಗಳ ಪ್ರಾಪ್ತಿಗಾಗಲೀ ಮಾಡುವ ಭಜನೆ ಕಷ್ಟಪರಂಪರೆಯನ್ನೇ ತಂದೊಡ್ಡುತ್ತದೆ. ಶ್ರೀರಾಮನಿಗಾಗಿ ಮಾಡುವ ಭಜನೆ ಕೀರ್ತನೆಗಳು ಪರಲೋಕ ಸಾಧನವು. ಪ್ರಾಪಂಚಿಕ ಬಂಧನಗಳನ್ನು ಕಳಚಿ, ಜನನಾದಿರೋಗಭಯವನ್ನು ನಿವಾರಿಸುವುದು. ಶ್ರೀರಾಮನ ಕೀರ್ತನೆಯನ್ನು ನಿರಂತರವಾಗಿ ಮಾಡುವವರ ಬಳಿಗೆ ಬರಲು ಯಮರಾಜನೂ ಕೂಡ ಹೆದರುತ್ತಾನೆ ಎನ್ನುತ್ತಾರೆ ಶ್ರೀತ್ಯಾಗರಾಜರು.

**೩. ಸ್ಮರಣಭಕ್ತಿ:** ಹರಿಕಥಾಶ್ರವಣದಿಂದಲೂ, ಶ್ರೀಹರಿಯ ಸಂಕೀರ್ತನೆಯಿಂದಲೂ ಸಂಗ್ರಹಿಸಿದ ಭಗವಂತನ ನಾಮರೂಪಗಳನ್ನು ಮನಸ್ಸಿನಲ್ಲಿ ನಿರಂತರ ನೆನೆಸಿಕೊಳ್ಳುವುದೇ ಸ್ಮರಣಭಕ್ತಿ. ನಿತ್ಯ ಸಂಧ್ಯೋಪಾಸನೆಯಲ್ಲಿ ಹೇಳುವಂತೆ,

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥**

'ಪವಿತ್ರನಾಗಿರಲಿ, ಅಪವಿತ್ರನಾಗಿರಲಿ, ಯಾವುದೇ ಸ್ಥಿತಿಯಲ್ಲಿರಲಿ, ಪುಂಡರೀಕಾಕ್ಷನಾದ ಶ್ರೀಹರಿಯ ಸ್ಮರಣೆಯನ್ನು ಮಾಡುವವನು ಒಳಗೂ ಹೊರಗೂ ಶುದ್ಧನಾಗುತ್ತಾನೆ.' ಇದು ಸ್ಮರಣಭಕ್ತಿಯ ಶಕ್ತಿ!

ಶ್ರೀತ್ಯಾಗರಾಜರು ತಮ್ಮ '**ಶ್ರೀಪತೇ! ನೀಪದಚಿಂತನೆ**' ಎಂಬ ಕೃತಿಯಲ್ಲಿ ಸ್ಮರಣಭಕ್ತಿಯನ್ನು ಕೊಂಡಾಡುತ್ತಾರೆ:



**ಶ್ರೀಪತೇ! ನೀಪದ ಚಿಂತನೇ ಜೀವನಮು ।**
**ನೇ ಪರದೇಶಿ, ನಾಗಾಸಿ ಬಾಪವೇ ಚನುವುನ ದಯ ಚೇಸಿ ।**

**ರಾಜಾಧಿರಾಜ ರವಿಕೋಟಿ ತೇಜ**
**ಪೂಜಿಂಚಿ ನಿನ್ನಿಂದ್ರಾದುಲು ದಿ-**
**ಗ್ರಾಜುಲೈ ವೆಲಯ ಲೇದಾ? ರಾಜಿಲ್ಲು**
**ಶ್ರೀ ತ್ಯಾಗರಾಜುನಿಕಿ!**

'ಓ ಶ್ರೀಪತಿ! ನಿನ್ನ ದಿವ್ಯ ಪಾದಗಳನ್ನು ಧ್ಯಾನಿಸುವುದೇ ಜೀವನ. ರಾಜಾಧಿರಾಜನೇ, ರವಿಕೋಟಿತೇಜನೇ, ಇಂದ್ರಾದಿಗಳು ನಿನ್ನನ್ನು ಪೂಜಿಸಿ ತಮ್ಮ ಸ್ಥಾನಗಳನ್ನು ಪಡೆದಿಲ್ಲವೆ? ನಾನೊಬ್ಬ ದೀನ, ನನ್ನ ಕಷ್ಟಗಳನ್ನು ಪ್ರೀತಿಯಿಂದ ಪರಿಹರಿಸಿ ಕಾಪಾಡು.'

ತಮ್ಮ ಜೀವನದ ಸರ್ವಸ್ವವೇ ಶ್ರೀರಾಮನಾಗಿರುವಾಗ, ಅನುದಿನ ಅವನನ್ನು ಧ್ಯಾನಿಸುತ್ತಾ ಸರ್ವಕಾಲದಲ್ಲೂ ಸರ್ವಾವಸ್ಥೆಯಲ್ಲೂ ಅವನನ್ನೇ ಸ್ಮರಿಸುತ್ತಾ ಸಂತೋಷವನ್ನು ಅನುಭವಿಸುವ ತಮಗೆ ಶ್ರೀರಾಮನು ಸದಾಕಾಲ ತನ್ನ ದರ್ಶನವನ್ನಿತ್ತು ಹರಸಬೇಕೆಂದು ಶ್ರೀತ್ಯಾಗರಾಜರು ತಮ್ಮ ದಿವ್ಯನಾಮಕೀರ್ತನೆಯೊಂದರಲ್ಲಿ ಪ್ರಾರ್ಥಿಸುತ್ತಾರೆ.

ಮತ್ತೊಂದು ಕೀರ್ತನೆಯಲ್ಲಿ, ಅಂತರಂಗದಲ್ಲಿ ಶ್ರೀರಾಮನ ದರ್ಶನ ಮಾಡುವುದೇ ಪರಮಸೌಖ್ಯ ಎನ್ನುತ್ತಾರೆ ಶ್ರೀತ್ಯಾಗರಾಜರು. ಭಗವಂತನ ಸ್ಮರಣೆ, ಅವನ ಧ್ಯಾನ ಮಾಡಿದ ಕೂಡಲೇ ತ್ಯಾಗರಾಜರು ಆನಂದದಿಂದ ಪುಳಕಿತರಾಗುತ್ತಿದ್ದರು.

ಭಗವಂತನ ಕೃಪೆ ಯಾವಾಗ ಲಭಿಸುವುದೋ ಯಾರಿಗೂ ತಿಳಿಯದು. ಅಲ್ಲಿಯವರೆಗೆ ಸಹನೆಯಿಂದ ಅವನ ದಿವ್ಯರೂಪದ ಧ್ಯಾನದಲ್ಲೇ ಕಾಲವನ್ನೆಲ್ಲಾ ವಿನಿಯೋಗ ಮಾಡಬೇಕು. ಪ್ರಾಮಾಣಿಕ ಮತ್ತು ಪರಮಭಕ್ತಿಯಿಂದ ಕೂಡಿದ ಧ್ಯಾನದಿಂದ ಶಾಶ್ವತ ಸುಖವು ಲಭಿಸುವುದು ಎಂಬ ವಿಚಾರವನ್ನು ಶ್ರೀತ್ಯಾಗರಾಜರ ಕೀರ್ತನೆಗಳಲ್ಲಿ ಕಾಣುತ್ತೇವೆ. ಇದನ್ನೇ ದಾಸವರೇಣ್ಯ ಶ್ರೀ ಪುರಂದರದಾಸರು 'ಹರಿಸ್ಮರಣೆಯನ್ನು ಮರೆತು ಭ್ರಷ್ಟರಾದರು ಮನುಜರು' ಎಂದು ಹಾಡಿದ್ದಾರೆ.

'**ರಾಮ ನೀ ವಾದು ಕೊಂದುವೋ ಕೊನವೋ**' ಎಂಬ ಕೀರ್ತನೆಯಲ್ಲಿ, 'ರಾಮಾ, ನನ್ನನ್ನು ಕಾಪಾಡಲು ನೀನು ಬರು

ತ್ತೀಯೋ ಇಲ್ಲವೊ? ನನ್ನ ಪೂಜಾಫಲವೇನೋ ನಿನಗೆ ತಿಳಿಯದು. ನಾನು ಗೊತ್ತುಗುರಿಯಿಲ್ಲದೆ ಅಲೆಯುತ್ತಿದ್ದರೂ ನನ್ನ ಮನಸ್ಸು ನಿನ್ನ ಭಕ್ತಿಯಲ್ಲಿ ನಿಂತಿದೆ. ಸಂತೋಷದಿಂದ ನಿನ್ನ ಧ್ಯಾನದಲ್ಲೇ ನನ್ನ ಕಾಲವನ್ನೆಲ್ಲಾ ವಿನಿಯೋಗ ಮಾಡಿದ್ದೇನೆ. ಮುದ್ದಾದ ನಿನ್ನ ದಿವ್ಯರೂಪವನ್ನು ಧ್ಯಾನಿಸಿದ್ದೇನೆ. ಹಿರಿಯರು ಹೇಳುವಂತೆ ಪ್ರಾಮಾಣಿಕ ಮತ್ತು ಪರಮಭಕ್ತಿಯಿಂದ ಕೂಡಿದ ಧ್ಯಾನದಿಂದ ಶಾಶ್ವತ ಸುಖವು ಲಭಿಸುವುದೆಂದು ನಂಬಿದ್ದೇನೆ. ನನಗೆ ಇಹ ಲೋಕದ ಐಶ್ವರ್ಯ ಬೇಕಿಲ್ಲ. ನಿನ್ನ ಜಪವೇ ನನಗೆ ಸರ್ವಸ್ವ; ನನ್ನ ಜೀವಾಧಾರ. ನನ್ನ ಅಪರಾಧಗಳನ್ನು ಮನ್ನಿಸು' ಎಂದು ಪ್ರಾರ್ಥಿಸುತ್ತಾರೆ.

**೪. ಪಾದಸೇವನಂ:** ಪರಮಾತ್ಮನ ಪಾದಪದ್ಮಗಳ ದರ್ಶನ ಮಾಡುತ್ತಾ, ಅವುಗಳನ್ನು ಪೂಜಿಸಿ, ಚರಣತೀರ್ಥ ಸೇವಿಸಿ, ಆ ದಿವ್ಯಪಾದಗಳನ್ನು ಶಿರದಲ್ಲಿರಿಸಿಕೊಳ್ಳುತ್ತಾ ಭಗವತ್ಪ್ರೇಮದಲ್ಲಿ ತನ್ಮಯರಾಗುವುದು – ಇದು ಪಾದಸೇವನ ಭಕ್ತಿಯ ಪ್ರಕಾರ. ಪರಮಪಾವನೆ ಗಂಗೆಯ ಉಗಮಸ್ಥಾನವಾದ ಶ್ರೀಹರಿಯ ಪಾದಗಳನ್ನು ಗರುಡ ಶೇಷಾದಿಗಳು ಭಕ್ತಿಯಿಂದ ಹೊತ್ತು ತಿರುಗಾಡುತ್ತಾ ಆನಂದಿಸುತಾರೆ.



ಶ್ರೀರಾಮಪಾದಮಾ! ನೀ ಕೃಪಜಾಲುನೇ
ಚಿತ್ತಾನಿಕಿ ರಾವೇ ॥ ಶ್ರೀ॥

ವಾರಿಜಭವ ಸನಕ ಸನಂದನ
ವಾಸವಾದುಲೆಲ್ಲ ಪೂಜಿಂಚೇ । ॥ಶ್ರೀ॥

ದಾರಿನಿ ಶಿಲಯೈ ತಾಪಮು ತಾಳಕ
ವಾರಮು ಕನ್ನೀರುನು ರಾಲ್ಚಗ
ಶೂರ ಅಹಲ್ಯನು ಜೂಚಿ ಬ್ರೋಚಿ ತಿವಿ
ಯಾರೀತಿ ಧನ್ಯು ಸೇಯವೇ ತ್ಯಾಗರಾಜಗೇಯಮಾ ॥ಶ್ರೀ॥

'ಶ್ರೀರಾಮನ ದಿವ್ಯಪಾದಗಳೇ, ನಿಮ್ಮ ಅನುಗ್ರಹವಿದ್ದರೆ ಸಾಕು. ನೀವು ಬಂದು ನನ್ನ ಮನಸ್ಸಿನಲ್ಲಿ ನೆಲೆಗೊಳ್ಳಿ. ಬ್ರಹ್ಮ ಸನಕ ಸನಂದನ ಇಂದ್ರ ಮುಂತಾದ ಮಹಾಮಹಿಮರು ನಿಮ್ಮನ್ನು ಪೂಜಿಸುತ್ತಾರೆ. ಬಹಳ ಕಾಲದಿಂದ ತಾಪವನ್ನು ತಾಳಲಾಗದೆ ಶಿಲೆಯಾಗಿ ಪರಿತಪಿಸುತ್ತಿದ್ದ ಅಹಲ್ಯೆಯು ನಿಮ್ಮ ದಾರಿಯಲ್ಲಿರಲು ನೀವು ಶಾಪವಿಮೋಚನೆ ಮಾಡಿದಿರಿ. ಅದೇ ರೀತಿ ನನ್ನನ್ನು ಧನ್ಯನನ್ನಾಗಿ ಮಾಡಿ' ಎಂದು ಶ್ರೀರಾಮನ ಶ್ರೀಪಾದಗಳ ವೈಭವವನ್ನು ಕೀರ್ತಿಸುತ್ತಾರೆ.

ಶ್ರೀರಾಮನ ಪಾದಗಳನ್ನು ಎಂದಿಗೂ ಬಿಡುವುದಿಲ್ಲವೆಂದೂ, ಮಹಾಸಮುದ್ರವನ್ನು ನಿಗ್ರಹಿಸಿದ ಶ್ರೀರಾಮನು ಭವಸಾಗರವನ್ನು ನಿಶ್ಚಯವಾಗಿ ದಾಟಿಸುತ್ತಾನೆ ಎಂದೂ ದೃಢವಿಶ್ವಾಸದಿಂದ ತ್ಯಾಗರಾಜರು ಶ್ರೀರಾಮನನ್ನು ಭಕ್ತಿತುಂಬಿ ಪ್ರಾರ್ಥಿಸುತ್ತಾರೆ.

ಮತ್ತೊಂದು ಕೃತಿಯಲ್ಲಿ ಶ್ರೀರಾಮನ ಸೋದರರು ರಾಮನ ಪಾದಸೇವೆ ಮಾಡುವ ಪರಿಯಲ್ಲೇ ತಾನೂ ಮಾಡಬೇಕೆಂಬುದು ತಮ್ಮ ಚಿರಕಾಲದ ಮಹದಭಿಲಾಷೆ ಎಂದೂ, ಇದೊಂದನ್ನು ಹೊರತು ತನಗೆ ಯಾವ ಪುರುಷಾರ್ಥವೂ, ಸಾರೂಪ್ಯವೂ ಕೂಡ ಬೇಡವೆಂದೂ ಹೇಳುತ್ತಾರೆ:

'ಓ ರಾಮಾ, ನನ್ನ ಸಂದೇಹವನ್ನು ನಿವಾರಿಸು. ನಂದನಿಂದ ಪೂಜಿಸಲ್ಪಡುವ ನಿನ್ನ ಪವಿತ್ರಪಾದಗಳು ಮೇಲೋ ಅಥವಾ ನಿನ್ನ ಪಾದುಕೆಗಳು ಮೇಲೊ? ನಿನ್ನ ಪಾದಗಳನ್ನು ಪೂಜಿಸಿದ ಭರತನು ನಿನ್ನನ್ನೇ ಪಡೆದನು' ಎಂಬುದಾಗಿ ಶ್ರೀ ತ್ಯಾಗರಾಜರು ಶ್ರೀರಾಮಚಂದ್ರನ ಪಾದಗಳು ಹಾಗೂ ಅವನ ಪಾದುಕೆಗಳ ವೈಭವವನ್ನು ಕುರಿತು ಹಾಡಿದ್ದಾರೆ.

**೫. ಅರ್ಚನಂ:** ಶ್ರೀತ್ಯಾಗರಾಜರು ಭಗವಂತನ ಅರ್ಚನೆಯ ಭಾಗವಾದ ಎಲ್ಲ ರೀತಿಯ ಉಪಚಾರಗಳನ್ನು ತಮ್ಮ ಸುಂದರ ಕೃತಿಗಳಲ್ಲಿ ಹಾಡಿದ್ದಾರೆ. ಭಗವಂತನಿಗೆ ಪ್ರಾತಃಕಾಲದ ಸುಪ್ರಭಾತ ಸೇವೆಯಿಂದ ಪ್ರಾರಂಭ ಮಾಡಿ, ನೈವೇದ್ಯ, ನೀರಾಜನ, ತಾಂಬೂಲ, ಛತ್ರ ಚಾಮರದ ಸೇವೆ ಮತ್ತು ಕಡೆಯದಾಗಿ ಭಗವಂತನ ಶಯನೋತ್ಸವಕ್ಕೆ ಲಾಲಿಪದಗಳನ್ನು ಹಾಡಿ ಶ್ರೀರಾಮನನ್ನು ಮೆಚ್ಚಿಸಿದ್ದಾರೆ.

'ಮೇಲುಕೋವಯ್ಯ' ಎಂಬ ಕೃತಿಯಲ್ಲಿ 'ಓ ಸೀತಾರಾಮ! ನನ್ನ ಭಾಗ್ಯವೇ! ಪ್ರಪಂಚವನ್ನು ಕಾಪಾಡಲು ಮೇಲೇಳು' ಎಂದು **ಸುಪ್ರಭಾತ** ಹಾಡುತ್ತಾ, ನಾರದಾದಿ ದೇವತೆಗಳು, ರಾಜಾಧಿರಾಜರು, ದೇವತಾಸ್ತ್ರೀಯರು ಎಲ್ಲರೂ ಶ್ರೀರಾಮನನ್ನು ಪೂಜಿಸಲು ಕಾದಿರುವರೆಂದು ವಿನಂತಿಸಿಕೊಳ್ಳುತ್ತಾರೆ.

'ಹೆಚ್ಚರಿಕಗಾ ರಾರಾ' ಎಂಬ ಕೃತಿಯಲ್ಲಿ, 'ಎಚ್ಚರಿಕೆಯಿಂದ ಬಾ ಹೇ ರಾಮಾ! ಸುಗುಣಗಳ ಗಣಿಯೇ, ಬಂಗಾರದ ಕಿರೀಟದ ಪ್ರಕಾಶದಿಂದ ಕುಂಡಲಗಳು ಆಡುತ್ತಿರುವಾಗ ಕಾಲ್ಗಡಗಗಳ ಘಲ್ ಘಲ್ ಎಂಬ ಶಬ್ದದೊಡನೆ ಸನಕಾದಿಗಳು ಸಂತೋಷಿಸುವಂತೆ ಎಚ್ಚರಿಕೆಯಿಂದ ಬಾ. ಬ್ರಹ್ಮ ದೇವೇಂದ್ರಾದಿಗಳು ಸ್ತುತಿ ಮಾಡುತ್ತಿರಲು, ದೇವತೆಗಳು ಪುಷ್ಪವೃಷ್ಟಿಗೈಯುತ್ತಿರುವಾಗ, ಮಹಿಮಾಶಾಲಿಯಾಗಲು ಬಯಸುವ ಶ್ರೀತ್ಯಾಗರಾಜನು ಕಾಣಲು ಎಚ್ಚರಿಕೆಯಿಂದ ಬಾ' ಎಂದು **ಸ್ವಾಗತ** ಬಯಸುತ್ತಾರೆ.

'ಚೇತುಲಾರ ಶೃಂಗಾರಮು ಜೇಸಿ' ಎಂಬ ಕೀರ್ತನೆಯಲ್ಲಿ 'ಶ್ರೀರಾಮ! ಬ್ರಹ್ಮಾದಿಗಳು ಆಶ್ಚರ್ಯಪಡುವಂತೆ ನನ್ನ ಕೈಗಳಿಂದ

ನಿನಗೆ **ಅಲಂಕಾರ** ಮಾಡಿ ಆನಂದಪಡುತ್ತೇನೆ' ಎಂದು ಶ್ರೀರಾಮನಿಗೆ ಸುವರ್ಣಮಯವಾದ ಉಡುಪನ್ನು ಉಡಿಸಿ, ಬಂಗಾರದ ಒಡವೆಗಳನ್ನು ತೊಡಿಸಿ, ಪಾರಿಜಾತ ಪುಷ್ಪಗಳಿಂದ ಅಲಂಕರಿಸಿ, ಬಂಗಾರದ ಉಡ್ಯಾಣ, ಪದಕ, ಅಮೂಲ್ಯವಾದ ಮುತ್ತಿನ ಹಾರವನ್ನು ಸುತ್ತಿ, ಗಂಧವನ್ನು ಹಚ್ಚಿ ಆನಂದಿಸುವುದಾಗಿ ಹಾಡುತ್ತಾರೆ.

'ತುಲಸೀಬಿಲ್ವಮಲ್ಲಿಕಾದಿ' ಎಂಬ ಕೀರ್ತನೆಯಲ್ಲಿ ತ್ಯಾಗರಾಜರು ಶ್ರೀರಾಮನಿಗೆ ಸಾಷ್ಟಾಂಗ ಪ್ರಣಾಮ ಮಾಡಿ, ತುಲಸೀ, ಬಿಲ್ವ ಮುಂತಾದ ಪತ್ರಗಳಿಂದಲೂ, ಮಲ್ಲಿಗೆ, ತಾವರೆ ಮೊದಲಾದ ಪರಿಮಳ ಭರಿತವಾದ ಪುಷ್ಪಗಳಿಂದಲೂ **ಅರ್ಚನೆ** ಮಾಡುತ್ತಾ,



'ಮೇಘಗಳಿಂದ ಕೂಡಿದ ಆಕಾಶಕ್ಕೆ ಸೂರ್ಯನಂತಿರುವವನೇ, ಹೃದಯವೆಂಬ ಸಮುದ್ರಕ್ಕೆ ಚಂದ್ರಪ್ರಾಯನೇ, ಬ್ರಹ್ಮ, ಸನಕಾದಿಗಳಿಂದ ಪೂಜಿಸಲ್ಪಡುವವನೇ, ಪ್ರೀತಿ, ಕೃತಜ್ಞತೆ ಹಾಗೂ ಸಂತೋಷದಿಂದ ತುಂಬಿರುವ ನನ್ನ ಈ ಪರಿಮಳ ಪತ್ರ-ಪುಷ್ಪಗಳ ಪೂಜೆಯನ್ನು ಸ್ವೀಕರಿಸು' ಎಂದು ಪ್ರಾರ್ಥಿಸುತ್ತಾರೆ.

'ಆರಗಿಂಪವೇ ಪಾಲಾರಗಿಂಪವೇ' ಎಂಬ ಕೀರ್ತನೆಯಲ್ಲಿ ಶ್ರೀರಾಮನಿಗೆ **ನೈವೇದ್ಯ**ವನ್ನು ಅರ್ಪಿಸುವಾಗ, 'ರಘುವೀರನಾದ ರಾಮನೇ, ಸೀತೆಯ ಪವಿತ್ರ ಕೈಗಳಿಂದಲೇ ಕೊಡಲ್ಪಡುವ ಈ ಹಾಲು ಬೆಣ್ಣೆಗಳನ್ನು ಸ್ವೀಕರಿಸು. ಅದಲ್ಲದೆ ಸಾರಮಯವಾದ ದಿವ್ಯಾನ್ನ ಹಾಗೂ ಷಡ್ರಸಭರಿತ ಭಕ್ಷ್ಯಗಳನ್ನು ಸೀತೆ ಹಾಗೂ ಸೋದರರೊಡನೆ ಕೂಡಿ ಸ್ವೀಕರಿಸು' ಎಂದು ಭಕ್ತಿ ತುಂಬಿ ಪ್ರಾರ್ಥಿಸುತ್ತಾರೆ.

'ವಿಡಮು ಸೇಯವೇ' ಎಂದು ಹಾಡುತ್ತಾ '**ತಾಂಬೂಲ**ವನ್ನು ದಯವಿಟ್ಟು ಸ್ವೀಕರಿಸು. ನನ್ನನ್ನು ತ್ಯಜಿಸಬೇಡ; ಎಲ್ಲ ಪರಿಕರಗಳೊಂದಿಗೆ ಇರುವ ತಾಂಬೂಲವನ್ನು ಸೀತೆಯ ಹಸ್ತದಿಂದ ಸ್ವೀಕರಿಸುವಂತೆ ಒಪ್ಪಿಸಿಕೋ. ಲಕ್ಷ್ಮಣನು ರಾಜಮರ್ಯಾದೆಯಿಂದ ನವರತ್ನಖಚಿತವಾದ ಪೀಕದಾನಿಯನ್ನು ಹಿಡಿದು ನಿಂತಿದ್ದಾನೆ' ಎಂದು ತಾಂಬೂಲವನ್ನು ಅರ್ಪಿಸುತ್ತಾರೆ.

'ಪತಿಕಿ ಹಾರತೀ ರೇ ಸೀತಾಪತಿಕಿ' ಎಂಬ ಕೀರ್ತನೆಯಲ್ಲಿ 'ಸರ್ವೇಶ್ವರನಾದ ಸೀತಾಪತಿಗೆ ನೀವೆಲ್ಲರೂ ಆರತಿ ಬೆಳಗಿ, ಅತಿ ಮೃದುವಾಗಿ ಸತ್ಯವಾದ ಮಾತನ್ನಾಡುವ ಅಖಿಲಾಂಡನಾಥನಿಗೆ, ಹೊನ್ನಿನ ಬಣ್ಣದ ಸರ್ಪದ ಮೇಲಿರುವ ಮರಕತಮಣಿಯಂತಹ ಶ್ಯಾಮಲವರ್ಣನಿಗೆ, ಸೂರ್ಯಚಂದ್ರರೂ, ಇಂದ್ರಾದಿದೇವತೆಗಳೂ, ಬ್ರಹ್ಮಶಂಕರರೂ, ಶುಕಗರುಡರೂ ನೋಡುತ್ತಿರುವಾಗ ತ್ಯಾಗರಾಜರಿಂದ ಸ್ತುತಿಸಲ್ಪಟ್ಟ ಸೀತಾರಾಮರಿಗೆ **ನೀರಾಜನ** ಮಾಡಿ' ಎಂದು ಹಾಡುತ್ತಾರೆ.

ಹೀಗೆ ಶ್ರೀರಾಮನಿಗೆ ಸರ್ವೋಪಚಾರ ಪೂಜೆ ಮಾಡುತ್ತಾ, ಛತ್ರಚಾಮರ, ವ್ಯಜನಗಳ ಸೇವೆ ಸಲ್ಲಿಸಿ, ಉಯ್ಯಾಲೆಯಲ್ಲಿ ಶ್ರೀರಾಮನನ್ನು ತೂಗಿ, ಲಾಲಿಪದ ಹಾಡುತ್ತಾ ಶಯನೋತ್ಸವ ಮಾಡಿ ಆನಂದಿಸುತ್ತಾರೆ. ಇವರ ಪ್ರೇಮಭಕ್ತಿಭರಿತವಾದ ಸೇವೆಯನ್ನು ಶ್ರೀರಾಮನೂ ಆದರಪೂರ್ವಕ ಸ್ವೀಕರಿಸಿ ಹರಸುತ್ತಾನೆ.

ತ್ಯಾಗರಾಜ ಸ್ವಾಮಿಯವರ ಅರ್ಚನಭಕ್ತಿಯ ಮತ್ತೊಂದು ಸುಂದರ ಕೃತಿ ಹೀಗಿದೆ:

ಚಲ್ಲರೇ ರಾಮಚಂದ್ರುನಿಪೈ ಪೂಲ! ॥ಪ॥

ಸೊಂಪೈನ ಮನಸುತೋ ಇಂಪೈನ ಬಂಗಾರು<br>
ಗಂಪಲತೋ ಮಂಚಿ ಚಂಪಕಮುಲನು ॥ಅ.ಪ ॥

ಪಾಮರಮುಲು ಮಾನಿ ನೇಮಮುತೋನು, ರ-<br>
ಮಾ ಮನೋಹರುನಿಪೈನ ತಾಮರ ಪೂಲ॥೧॥

ಧಾತವಿನುತುಡೈನ ಸೀತಾಪತಿ ಪೈನ<br>
ಚೇತುಲತೋ ಪಾರಿಜಾತ ಸುಮಮುಲ॥೨॥

ಈ ಜಗತಿನಿ ದೇವಪೂಜಾರ್ಹಮೌ ಪೂಲ<br>
ರಾಜಿಲೋ ಮೈಲೈನ ಜಾಜಿ ಸುಮಮುಲ ॥೩॥

ಅಮಿತ ಪರಾಕ್ರಮ ದ್ಯುಮಣಿಕುಲಾರ್ಣವ<br>
ವಿಮಲಚಂದ್ರುನಿಪೈ ಹೃತ್ಕುಮುದ ಸುಮಮುಲ॥೪॥

ಎನ್ನರಾನಿ ಜನನಮರಣಮುಲು ಲೇಕುಂಡ<br>
ಮನಸಾರ ತ್ಯಾಗರಾಜನುತುನಿಪೈ ನಿ! ॥೫॥

'ಶ್ರೀರಾಮಚಂದ್ರನ ಮೇಲೆ ಹೂವನ್ನು ಚೆಲ್ಲಿರಿ; ನಿತ್ಯದ ಚಟುವಟಿಕೆಗಳನ್ನು ಬದಿಗಿರಿಸಿ, ಚಿನ್ನದ ಬುಟ್ಟಿಗಳಲ್ಲಿರುವ ಸಂಪಿಗೆಯ ಹೂಗಳನ್ನು ಸೊಂಪಾದ ಮನಸ್ಸಿನಿಂದ, ನಿಷ್ಠೆಯಿಂದ ಸ್ವಾಮಿಯ ಮೇಲೆ ಚೆಲ್ಲಿ ಅರ್ಚನೆ ಮಾಡಿ; ಪಾರಿಜಾತ ಪುಷ್ಪಗಳನ್ನು ಎರಡು ಕೈಗಳಿಂದ ತೆಗೆದುಕೊಂಡು ಬ್ರಹ್ಮನಿಂದ ಸ್ತುತಿಸಲ್ಪಟ್ಟ ಸೀತಾಪತಿಯನ್ನು ಅರ್ಚಿಸಿ; ಪುಷ್ಪಗಳಲ್ಲಿ ಶ್ರೇಷ್ಠವಾದ ಜಾಜಿ ಹೂಗಳಿಂದ ಸ್ವಾಮಿಯ ಅರ್ಚನೆ ಮಾಡಿ; ಸೂರ್ಯವಂಶದ ಸುಧಾಂಬುಧಿಯಲ್ಲಿ ಉದಯಿಸಿರುವ ವಿಮಲಚಂದ್ರನಾದ ಸ್ವಾಮಿಯನ್ನು ಹೃದಯಕಮಲಗಳಿಂದ ಅರ್ಚಿಸಿ, ತ್ಯಾಗರಾಜನಿಂದ ಸ್ತುತಿಸಲ್ಪಡುತ್ತಿರುವ ಶ್ರೀರಾಮನನ್ನು ಜನನ-ಮರಣಗಳಿಂದ ಮುಕ್ತರಾಗಲು ಹೃದಯಪೂರ್ವಕವಾಗಿ ಅರ್ಚಿಸಿ.'

*(ಮುಂದಿನ ಸಂಚಿಕೆಗೆ)*

ಸ್ವಾಮಿ ನಿತ್ಯಸ್ಥಾನಂದ

# ದೈವಾಸುರ ಸಂಪತ್ತು




**ಈ** ಪ್ರಪಂಚದಲ್ಲಿ ಎರಡು ಶಕ್ತಿಗಳು ಕೆಲಸ ಮಾಡುತ್ತವೆ – ಒಂದು ಒಗ್ಗೂಡಿಸುವ ಶಕ್ತಿ, ಇನ್ನೊಂದು ವಿಭಾಗಿಸುವ ಶಕ್ತಿ. ಒಂದು ರಚನಾತ್ಮಕವಾದುದು, ಇನ್ನೊಂದು ವಿನಾಶಾತ್ಮಕವಾದುದು. ಪರಮಾಣುಗಳು ಒಂದಕ್ಕೊಂದು ಸೇರುತ್ತ ಈ ಜಗತ್ತು ಉಂಟಾಗಿದೆಯೆಂದು ತತ್ತ್ವಜ್ಞಾನಿಗಳು ಹೇಳುತ್ತಾರೆ. ಪ್ರಪಂಚದ ಎಲ್ಲ ದ್ರವ್ಯಗಳೂ ಪರಮಾಣುಗಳ ವಿವಿಧ ಬಗೆಯ ಸೇರುವಿಕೆಯಿಂದ ಉಂಟಾಗಿದೆ ಎಂದು ವಿಜ್ಞಾನಿಗಳೂ ಹೇಳುತ್ತಾರೆ. ಆ ಪರಮಾಣುಗಳನ್ನು ಪ್ರತ್ಯೇಕಿಸಿದಾಗ ಆ ದ್ರವ್ಯವು ನಾಶವಾಗುತ್ತದೆ. ಅನೇಕ ಅವಯವಗಳನ್ನು ಒಂದುಗೂಡಿಸಿದಾಗ ವಿವಿಧ ವಸ್ತುಗಳು ಸೃಷ್ಟಿಯಾಗುತ್ತವೆ. ಹಾಗೆಯೇ ಪ್ರತ್ಯೇಕಿಸಿದಾಗ ಆಯಾಯ ವಸ್ತುವು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ. ನಮ್ಮ ವ್ಯಕ್ತಿತ್ವದಲ್ಲಿ ವಿವಿಧ ಅಂಶಗಳು ಒಂದಾಗಿ ಕೆಲಸ ಮಾಡಿದಾಗ ವ್ಯಕ್ತಿತ್ವದಲ್ಲಿ ಸಮಗ್ರತೆ ಇರುತ್ತದೆ. ಅದಿಲ್ಲದಿದ್ದರೆ ವ್ಯಕ್ತಿತ್ವದಲ್ಲಿ ಒಡುಕು ಉಂಟಾಗುತ್ತದೆ. ಹಾಗೆಯೇ ಕುಟುಂಬದಲ್ಲಿಯೂ ಎಲ್ಲರೂ ಹೊಂದಿಕೊಂಡು ಒಂದಾಗಿ ಬಾಳಿದರೆ ನೆಮ್ಮದಿ ಇರುತ್ತದೆ. ಅದಿಲ್ಲದಿದ್ದರೆ ಕುಟುಂಬದಲ್ಲಿಯೂ ಒಡಕುಂಟಾಗುತ್ತದೆ. ಹೀಗೆಯೇ ಇದು ಜೀವನದ ಎಲ್ಲ ಕ್ಷೇತ್ರಗಳಿಗೂ, ಸಂಸ್ಥೆಗಳಿಗೂ ಒಟ್ಟು ಸಮಾಜಕ್ಕೂ ಅನ್ವಯಿಸುತ್ತದೆ. ಈ ಒಗ್ಗೂಡಿಸುವ ಶಕ್ತಿಯನ್ನು ದೈವೀಸಂಪತ್ತೆಂದೂ ವಿಭಾಜಕ ಶಕ್ತಿಯನ್ನು ಆಸುರೀಸಂಪತ್ತೆಂದೂ ಕರೆಯಬಹುದು.

ದೈವೀಸಂಪತ್ತು ಜೀವನಾಧಾರವಾದುದು, ಅದು ಜೀವನವನ್ನು ಸಮರ್ಥಿಸುತ್ತದೆ, ಜೀವನಾಸಕ್ತಿಯನ್ನು ಕೆರಳಿಸುತ್ತದೆ. ತಾನೂ ಬದುಕಿ ಇತರರೂ ಬದುಕಿರಬೇಕೆಂಬ ಮನೋಭಾವಕ್ಕೆ ಅದು ಪುಷ್ಟಿಯನ್ನು ನೀಡುತ್ತದೆ. ತನ್ನನ್ನೂ ಪ್ರೀತಿಸುತ್ತ ಇತರರೆಲ್ಲರನ್ನೂ ಪ್ರೀತಿಸುವ ಉದಾತ್ತ ದೃಷ್ಟಿಕೋನವನ್ನು ಅದು ನಮಗೆ ನೀಡುತ್ತದೆ. ಒಂದು ಆಶಾದಾಯಕ, ಸ್ವೀಕರಿಸುವ ಮನೋಭಾವವನ್ನು ನೀಡುತ್ತದೆ. ಅದು ಉನ್ನತ ಆದರ್ಶದ ಕಡೆಗೆ ನಮ್ಮನ್ನು ಸೆಳೆದುಕೊಂಡು ಹೋಗುತ್ತದೆ. ಮುಖ್ಯವಾಗಿ ಅದು ಪ್ರೀತಿಯ ಶಕ್ತಿಯಾಗಿ ಅಭಿವ್ಯಕ್ತವಾಗುತ್ತದೆ. ಪ್ರೀತಿಯೇ ಪ್ರಮುಖವಾದ ಒಗ್ಗೂಡಿಸುವ ಶಕ್ತಿಯೆಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಇಂತಹ ವ್ಯಕ್ತಿಗಳು **'ಆತ್ಮನೋ ಮೋಕ್ಷಾರ್ಥಂ ಜಗದ್ಧಿತಾಯ ಚ'** ಜೀವನವನ್ನು ನಡೆಸುತ್ತಾರೆ.

ಪ್ರೀತಿಗೆ ವಿರುದ್ಧವಾದ ವಿಭಾಗಿಸುವ ಶಕ್ತಿ ದ್ವೇಷರೂಪದಲ್ಲಿ ವ್ಯಕ್ತವಾಗುತ್ತದೆ. ಇದು ವಿನಾಶಕಾರಿಯಾದುದು, ಜೀವನವಿರೋಧಿಯಾದುದು, ಮೃತ್ಯುಪ್ರಾಯವಾದುದು. ಈ ದ್ವೇಷ ಶಕ್ತಿಯ ಪ್ರಭಾವದಿಂದ ವ್ಯಕ್ತಿಯು ತನ್ನನ್ನೇ ದ್ವೇಷಿಸುತ್ತಾನೆ ಮತ್ತು ಈ ಆತ್ಮದ್ವೇಷ ಹೊರಗೆ ವಿಧ್ವಂಸಕ ರೂಪದಲ್ಲಿ ವ್ಯಕ್ತವಾಗುತ್ತದೆ. ಇದಕ್ಕೆ ಜ್ವಲಂತ ಉದಾಹರಣೆ ಇಂದಿನ ಜಿಹಾದಿಗಳು. ತನ್ನನ್ನು ದ್ವೇಷಿಸುವ ವ್ಯಕ್ತಿಯು ಇತರರನ್ನೂ ದ್ವೇಷಿಸುತ್ತಾನೆ. ಜೀವನದಲ್ಲಿ ಒಂದು ನಿರ್ದಿಷ್ಟವಾದ ಅರ್ಥವನ್ನು ಕಂಡುಕೊಳ್ಳಲು ಅಸಮರ್ಥರಾದ, ತಮ್ಮನ್ನು ಒಂದು ವ್ಯವಸ್ಥೆಯೊಡನೆ ಅರ್ಥಪೂರ್ಣವಾಗಿ ಸಂಬಂಧಿಸಿಕೊಳ್ಳಲಾಗದ ವ್ಯಕ್ತಿಗಳು ತಮ್ಮ ಜೀವನವನ್ನೇ ದ್ವೇಷಿಸುತ್ತಾರೆ, ದುರ್ವ್ಯಸನಗಳ ಮತ್ತು ದುಷ್ಕಾರ್ಯಗಳ ಮೂಲಕ ತಮ್ಮನ್ನು ತಾವೇ ಕ್ರಮೇಣ ನಾಶಪಡಿಸಿಕೊಳ್ಳುತ್ತಾರೆ, ಹಾಗೂ ಇತರರನ್ನು ನಾಶಮಾಡುತ್ತಾರೆ. ತಮ್ಮ ಜೀವನಕ್ಕೇ ಬೆಲೆ ಕೊಡದವರು ಇತರರ ಜೀವನಕ್ಕೆ ಬೆಲೆ ಕೊಡುತ್ತಾರೆಯೆ? 'ಆತ್ಮನೋ ನಾಶಾರ್ಥಂ ಜಗದ್ವಿನಾಶಯಚ' ಜೀವನವನ್ನು ನಡೆಸುತ್ತಾರೆ. ಇದೇ ಆಸುರೀ ಸಂಪತ್ತೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಪ್ರೀತಿಯು ರಕ್ಷಾಶಕ್ತಿ ಮತ್ತು ದ್ವೇಷವು ನಾಶಶಕ್ತಿ. ಈ ಎರಡೂ ಶಕ್ತಿಗಳು ಪ್ರಪಂಚದಲ್ಲಿ ಕೆಲಸ ಮಾಡುತ್ತಿವೆ. ಎಲ್ಲ ವಸ್ತು ಮತ್ತು ವ್ಯಕ್ತಿಗಳಲ್ಲಿ ಈ ಎರಡು ಶಕ್ತಿಗಳು ಇರುವುದನ್ನು ನಾವು ನೋಡುತ್ತೇವೆ. ಈ ದೇಹವನ್ನು ನಾಶಮಾಡುವ ಅಸಂಖ್ಯ ರೋಗಾಣುಗಳು ದೇಹದ ಹೊರಗೆ ಮತ್ತು ಒಳಗೆ ಇವೆ. ಹಾಗೆಯೇ ಇದನ್ನು ರಕ್ಷಿಸುವ ಶಕ್ತಿಯೂ ನಿರಂತರವಾಗಿ ಕೆಲಸಮಾಡುತ್ತಿದೆ. ಎಲ್ಲ ವಸ್ತು ಮತ್ತು ವ್ಯಕ್ತಿಗಳಲ್ಲಿ ಈ ಎರಡು ಶಕ್ತಿಗಳು ಇರುವುದನ್ನು ನಾವು ನೋಡುತ್ತೇವೆ. ಈ ದೇಹವು ಬೆಳೆಯುತ್ತಿರುವಂತೆಯೇ ಸಾವಿನ ಕಡೆಗೆ ಧಾವಿಸುತ್ತದೆ. ಮಗುವು ಹುಟ್ಟಿದಂದಿನಿಂದಲೂ ಸಾಯುತ್ತಲೇ ಇರುತ್ತದೆ. ಈ ಸಾವಿನ ಕೊನೆಯ ಹಂತವೇ ಮೃತ್ಯು. ಆದ್ದರಿಂದ ಜೀವನ ಮರಣಗಳೆರಡೂ ಅಸ್ತಿತ್ವದ ಅವಿಭಾಜ್ಯ ಅಂಗಗಳು. ದೇವಾಸುರ ಸಂಪತ್ತುಗಳೆರಡೂ ಜಗತ್ತಿನ ಸಮತೋಲನಕ್ಕಾಗಿ ಸೃಷ್ಟಿಕರ್ತನೇ ನಿರ್ಮಿಸಿರುವ ತಂತ್ರ. ಈ ದೇಹದಲ್ಲಿ ಜೀವಕೋಶಗಳು ವೃದ್ಧಿಯಾಗುವುದನ್ನು ನಿಯಂತ್ರಿಸುವ ಒಂದು ಶಕ್ತಿಯೂ ಕೆಲಸ ಮಾಡುತ್ತಿರುತ್ತದೆ. ಆ ಶಕ್ತಿಯು ಕೆಲಸ ಮಾಡದಿದ್ದರೆ ವ್ಯಕ್ತಿಯು ಕ್ಯಾನ್ಸರ್ ರೋಗಕ್ಕೆ ಬಲಿಯಾಗುತ್ತಾನೆ. ಆದ್ದರಿಂದ ವಿಷ್ಣು, ಶಿವರ ಕೆಲಸ ನಿರಂತರ ನಡೆಯುತ್ತಿದೆ. ಇಬ್ಬರೂ ನಮಗೆ ಪೂಜ್ಯರೇ. ಬಹುಶಃ ಇದರಿಂದಾಗಿಯೇ ಶಿವನು ರಾಕ್ಷಸರಿಗೆ ವರದಾನ ಮಾಡುವುದನ್ನೂ ವಿಷ್ಣುವು ದೇವತೆಗಳಿಗೆ ಒಲಿಯುವುದನ್ನೂ ಪುರಾಣಗಳಲ್ಲಿ ಓದುತ್ತೇವೆ.

ದೈವೀಸಂಪತ್ತಿನ ಬಗ್ಗೆ ಭಗವದ್ಗೀತೆಯ ಉದ್ದಕ್ಕೂ ಸಾಕಷ್ಟು ಹೇಳಿರುವುದರಿಂದ ಹದಿನಾರನೇ ಅಧ್ಯಾಯದಲ್ಲಿ ಅಸುರೀ

ಸಂಪತ್ತಿನ ಕುರಿತಾಗಿ ಹೆಚ್ಚು ವಿಸ್ತಾರವಾಗಿ ಹೇಳಲಾಗಿದೆ. ಒಳಿತು ಕೆಡಕು ಗಳು ಎಲ್ಲದರಲ್ಲಿಯೂ ಇರುತ್ತವೆ ಎಂಬುದು ಸರ್ವವಿದಿತ. ಆಸುರೀ ಸಂಪತ್ತಿನ ವ್ಯಕ್ತಿಗಳ ಒಂದು ಪ್ರತ್ಯೇಕ ವರ್ಗವಿರುತ್ತದೆಂದು ನಾವು ಭಾವಿಸಬಾರದು. ಈ ಸಂಪತ್ತು ಪ್ರತಿಯೊಬ್ಬರಲ್ಲೂ ವಿವಿಧ ಪ್ರಮಾಣದಲ್ಲಿ ಇರುತ್ತದೆ. ಇದನ್ನು ಗುರುತಿಸಿ, ಇದರಿಂದ ಮುಕ್ತ ರಾಗಲು ನಾವು ಪ್ರಯತ್ನಿಸಬೇಕೆಂಬ ಉದ್ದೇಶದಿಂದ ಶ್ರೀಕೃಷ್ಣನು ಇದರ ಕೆಲವು ಲಕ್ಷಣಗಳನ್ನು ಇಲ್ಲಿ ಸೂಚಿಸುತ್ತಾನೆ. ಆದರೆ ಇದನ್ನೇ ಮೆಲುಕುಹಾಕುತ್ತಿರಬೇಕೆಂದು ಭಾವಿಸಬಾರದು. ಆಸುರೀ ಸಂಪ ತ್ತಿನ ಕೆಲವು ಗುಣಗಳನ್ನು ಇಲ್ಲಿ ಪರಿಶೀಲಿಸೋಣ.

ಆಸುರೀಜನರು ಪ್ರವೃತ್ತಿ ಮತ್ತು ನಿವೃತ್ತಿಗಳನ್ನು ಅರಿಯರು. ಇವೆರಡರ ಸ್ವರೂಪ ಎಂತಹವೆಂಬುದನ್ನು ಸ್ವಾಮಿ ವಿವೇಕಾನಂದರು ವಿವರಿಸುತ್ತಾರೆ: ''ಇಂದ್ರಿಯಗಳ ಮೂಲಕ ಪ್ರಕಟವಾಗಿಸಲು ಪ್ರಯತ್ನಿಸುತ್ತಿರುವ ಒಂದು ಭಾವ ಮನಸ್ಸಿನಲ್ಲಿದೆ ಅದರ ಹಿಂದೆ, ಎಷ್ಟೇ ದುರ್ಬಲವಾದರೂ, 'ಹೊರಗೆ ಹೋಗಬೇಡ' ಎನ್ನುವ ಕ್ಷೀಣವಾಣಿಯೊಂದು ಇದೆ. ಈ ಭಾವಗಳಿಗೆ ಸುಂದರವಾದ ಎರಡು ಸಂಸ್ಕೃತ ಪದಗಳಿವೆ – ಪ್ರವೃತ್ತಿ ಮತ್ತು ನಿವೃತ್ತಿ – ಮುಂದೆ ಹೋಗುವುದು ಮತ್ತು ಹಿಂದಿರುಗುವುದು. ಪ್ರವೃತ್ತಿಯೇ ಸಾಧಾ ರಣವಾಗಿ ನಮ್ಮ ಕ್ರಿಯೆಗಳಿಗೆ ಕಾರಣ. ನಿವೃತ್ತಿಯಿಂದ ಧರ್ಮ ಪ್ರಾರಂಭವಾಗುತ್ತದೆ. 'ಬೇಡ' ಎನ್ನುವುದರಿಂದ ಧರ್ಮ ಮೊದಲಾ ಗುತ್ತದೆ. 'ಬೇಡ' ಎನ್ನುವುದರಿಂದ ಆಧ್ಯಾತ್ಮಿಕತೆ ಮೊದಲಾಗುತ್ತದೆ. 'ಬೇಡ' ಎನ್ನುವುದು ಇಲ್ಲದೇ ಇದ್ದರೆ ಧರ್ಮ ಇನ್ನೂ ಪ್ರಾರಂಭ ವಾಗಿಲ್ಲವೆಂದೇ ಅರ್ಥ.'' *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೨., ಪು.೬೯)*

ಒಂದು ಹೊರಮುಖ ಪ್ರವೃತ್ತಿ, ಇನ್ನೊಂದು ಒಳಮುಖ ಪ್ರವೃತ್ತಿ. ಬಾಹ್ಯ ಸಾಧನೆಯಲ್ಲಿಯೇ ನಿಮ್ಮ ಮನಶ್ಶಕ್ತಿಯೆಲ್ಲವನ್ನೂ ವ್ಯಯಿಸುವುದು ಪ್ರವೃತ್ತಿ. ಈ ಮನಶ್ಶಕ್ತಿಯನ್ನು ಒಳಮುಖಗೊಳಿಸಿ ಆಧ್ಯಾತ್ಮಿಕ ಉನ್ನತಿಯನ್ನು ಸಾಧಿಸುವುದು ನಿವೃತ್ತಿ. ಕೆಲವರು ಅಧ್ಯಾತ್ಮವನ್ನೂ ಬಯಸುತ್ತಾರೆ, ಆದರೆ ತಮ್ಮ ಪ್ರವೃತ್ತಿಯನ್ನೂ ಬಿಡಲಾರರು. ಅಧ್ಯಾತ್ಮವನ್ನು ತಮ್ಮ ಪ್ರವೃತ್ತಿಯೊಡನೆ ಹೊಂದಿಸಿ ಕೊಳ್ಳುತ್ತ ಇಬ್ಬಗೆಯ ಡಾಂಭಿಕ ಜೀವನವನ್ನು ನಡೆಸಲು ಪ್ರಯತ್ನಿಸು ತ್ತಾರೆ. ಸ್ವಾಮಿ ವಿವೇಕಾನಂದರು ಲೌಕಿಕವನ್ನು ಆಧ್ಯಾತ್ಮಿಕಗೊಳಿಸ ಬೇಕೆಂದು ಕರೆ ನೀಡಿದರು. ಆದರೆ ಇಂದಿನ ದಿನಗಳಲ್ಲಿ ಅಧ್ಯಾತ್ಮ ವನ್ನೇ ಲೌಕಿಕಗೊಳಿಸುವ ಪ್ರಯತ್ನ ನಡೆಯುತ್ತಿದೆ. ಲೌಕಿಕ ಆಧ್ಯಾತ್ಮಿ ಕತೆಯು (Secular Spirituality) ಬಗ್ಗೆ ಇತ್ತೀಚೆಗೆ ಬಹಳಷ್ಟು ಕೇಳಿಬರುತ್ತಿದೆ. ಅನೇಕರು ಸ್ವಯಂಘೋಷಿತ ದೇವಮಾನವರಾಗಿ ಕೆಲವು ಕಾಲ ಮೆರೆದು ಕೊನೆಗೆ ಜೇಲು ಸೇರುತ್ತಾರೆ. ಹೀಗೆ ಪ್ರವೃತ್ತಿ ಮತ್ತು ನಿವೃತ್ತಿಗಳ ನಿಜವಾದ ಅರ್ಥವನ್ನು ತಿಳಿದೂ ಅನುಸರಿಸ ಲಾಗದೆ ರಾಮ, ಕಾಮಗಳೆರಡನ್ನೂ ಹೊಂದಾಣಿಸಿಕೊಂಡು ಬಾಳುವವರು ಆಸುರೀ ಸಂಪತ್ತಿನವರು.

ಇನ್ನು ಕೆಲವರು ತುಂಬ ಕಾರ್ಯನಿರತರಾಗಿರುವುದೊಂದೇ ಪ್ರವೃತ್ತಿಯೆಂದು, ಬಿಡುವಿಲ್ಲದೆ ಚಟುವಟಿಕೆಯಲ್ಲಿ ತೊಡಗುತ್ತಾರೆ, ಮತ್ತು ಅದಕ್ಕೆ ಅನೇಕ ಕಾರಣಗಳನ್ನು ನೀಡಿ ಅದನ್ನು ಸಮರ್ಥಿಸು ತ್ತಾರೆ. ಇದರಿಂದಾಗಿ ತಮ್ಮ ಆಧ್ಯಾತ್ಮಿಕ ಒಳಿತನ್ನೂ ಮಾನಸಿಕ ಸ್ವಾಸ್ಥ್ಯ ವನ್ನೂ ದೈಹಿಕ ಆರೋಗ್ಯವನ್ನೂ ಕಳೆದುಕೊಳ್ಳುತ್ತಾರೆ. ಮತ್ತೆ ಕೆಲ ವರು ನಿವೃತ್ತಿಯ ನೆವದಲ್ಲಿ ಏನೂ ಕೆಲಸಮಾಡದೆ, ತಮಗೂ ಇತರ ರಿಗೂ ಹೊರೆಯಾಗಿ ಬಾಳುತ್ತಾರೆ. ಹೀಗೆ ಪ್ರವೃತ್ತಿ ಮತ್ತು ನಿವೃತ್ತಿ ಗಳ ಸರಿಯಾದ ಅರ್ಥವನ್ನು ತಿಳಿಯದೆ ನಿಃರರ್ಥಕ ಜೀವನವನ್ನು ನಡೆಸುವವರು ಆಸುರೀಸಂಪತ್ತಿನವರು. ಜ್ಞಾನಿಗಳು ಎಷ್ಟೇ ಪ್ರವೃತ್ತ ರಾಗಿದ್ದರೂ ಅಂತರಂಗದಲ್ಲಿ ನಿವೃತ್ತಿಭಾವವನ್ನು ಅನುಭವಿಸು ತ್ತಿರುತ್ತಾರೆ. ಅವರು ಎಷ್ಟೇ ಕೆಲಸ ಮಾಡುತ್ತಿದ್ದರೂ ಬ್ಯುಸಿಯಾಗಿರು ವುದಿಲ್ಲ. ಆದರೆ ಇದಕ್ಕೆ ವಿರುದ್ಧವಾಗಿ ಸಾಮಾನ್ಯ ವ್ಯಕ್ತಿಯು ಏನೂ ಕೆಲಸ ಮಾಡದಿದ್ದರೂ ಮನಸ್ಸು ಅತ್ಯಂತ ಪ್ರವೃತ್ತವಾಗಿರುತ್ತದೆ, ಯಾವಾಗಲೂ ಕುಣಿಯುತ್ತಿರುತ್ತದೆ ಮತ್ತು ಕುದಿಯುತ್ತಿರುತ್ತದೆ. ಭಾವನೆಯು ಕೆಳಗಿನ ಶ್ಲೋಕದಲ್ಲಿ ಸುಂದರವಾಗಿ ವ್ಯಕ್ತ ವಾಗಿದೆ:

**ನಿವೃತ್ತಿರಪಿ ಮೂಢಸ್ಯ ಪ್ರವೃತ್ತಿರುಪಜಾಯತೇ ।**
**ಪ್ರವೃತ್ತಿರಪಿ ಧೀರಸ್ಯ ನಿವೃತ್ತಿಫಲದಾಯಿನಿ ॥**

''ಮೂಢನಿಗೆ ನಿವೃತ್ತಿಯೂ ಪ್ರವೃತ್ತಿಯಾಗಿ ಪರಿಣಮಿಸುತ್ತದೆ. ಜ್ಞಾನಿಗೆ ಪ್ರವೃತ್ತಿಯೂ ಕೂಡ ನಿವೃತ್ತಿಯ ಫಲವನ್ನು ನೀಡುತ್ತದೆ.'' ದೈವೀಪುರುಷರು ಕೆಲಸ ಮಾಡದೆಯೇ ಜಗತ್ತಿಗೆ ಹಿತವನ್ನುಂಟು ಮಾಡುತ್ತಾರೆ. ಆಸುರೀಸಂಪದ್ಭರಿತರು ಕೆಲಸ ಮಾಡಿ ಸಮಾಜಕ್ಕೆ ಹಾನಿಯನ್ನುಂಟುಮಾಡುತ್ತಾರೆ. ಇಂಥವರು ಬೇಗ ನಿವೃತ್ತರಾದರೆ ಒಳ್ಳೆಯದಲ್ಲವೆ? ಹಾಗಾಗುವುದಿಲ್ಲ, ಅವರಿಗೆ ನಿವೃತ್ತಿಯೂ ಪ್ರವೃತ್ತಿಯಾಗುತ್ತದೆ.

ಆಸುರೀಸಂಪತ್ತಿನವರಿಗೆ ಶುಚಿತ್ವವಿರುವುದಿಲ್ಲ, ಅವರು ಅನಾ ಚಾರಿಗಳಾಗಿರುತ್ತಾರೆ – ಎಂದು ಶ್ರೀಕೃಷ್ಣನು ಹೇಳುತ್ತಾನೆ. ಅಂದರೆ ಅವರು ತುಂಬ ಕೊಳಕು, ಹತ್ತಿರ ಹೋದರೆ ವಾಸನೆ ಬರುತ್ತದೆ. ಜೀವನ್ಮುಕ್ತರೂ ಕೆಲವೊಮ್ಮೆ ಹೀಗಿರುವುದುಂಟು. ಆದರೆ ಇವರು ಹಾಗಲ್ಲ, ಇವರು ನಿಯಮಮುಕ್ತರು. ಇವರು ಎಂಥ ಆಹಾರವನ್ನಾ ದರೂ, ಎಷ್ಟಾದರೂ, ಎಲ್ಲಾದರೂ ತಿನ್ನುತ್ತಾರೆ. ಯಾವ ಆಚಾರ ವನ್ನೂ ಅನುಸರಿಸುವುದಿಲ್ಲ. ನೀರು ಕುಡಿದಂತೆ ಸುಳ್ಳು ಹೇಳುತ್ತಾರೆ. ಆಚರಣೆಯಲ್ಲಾಗಲಿ, ನಡೆನುಡಿಗಳಲ್ಲಾಗಲಿ, ಕೆಲಸಗಳಲ್ಲಾಗಲಿ ಯಾವ ಶಿಸ್ತನ್ನೂ ಅನುಸರಿಸುವುದಿಲ್ಲ. ಇಂತಹ ವ್ಯಕ್ತಿಗಳ ಸಹ ವಾಸವೇ ಕಷ್ಟ. ಯಾವಾಗ ಹೇಗೆ ವರ್ತಿಸುತ್ತಾರೋ ಊಹಿಸಲೂ ಸಾಧ್ಯವಿಲ್ಲ. ಸಂಸ್ಕೃತದಲ್ಲಿ ಒಂದು ಹೇಳಿಕೆಯಿದೆ. **ಅವ್ಯವಸ್ಥಿತಚಿತ್ತಸ್ಯ ಪ್ರಸಾದೋಽಪಿ ಭಯಂಕರಃ** – 'ಅವ್ಯವಸ್ಥಿತ ಮನಸ್ಸಿನವರ ಅನು ಗ್ರಹವೂ ಶಾಪವಾಗಬಹುದು.'

ಇನ್ನೊಂದು ಬಗೆಯ ಆಸುರೀಸಂಪತ್ತಿನವರು ನಾಸ್ತಿಕ ಮನೋ ಭಾವದವರು. ಅವರಿಗೆ ಯಾವುದೇ ಅಸ್ತಿತ್ವದಲ್ಲಿಯೂ ಶ್ರದ್ಧೆಯಿಲ್ಲ.

ಜಗತ್ತಿಗೆ ಯಾವುದೇ ತಳಹದಿಯಿಲ್ಲ, ಇದರ ಹಿಂದೆ ನಿಯಾಮಕನಾದ ಈಶ್ವರನೂ ಇಲ್ಲ ಮತ್ತು ಇದು ಪರಸ್ಪರ ಕೂಡುವಿಕೆಯಿಂದ ತಾನೇ ತಾನಾಗಿ ಉದ್ಭವವಾಗಿದೆ ಎಂದು ಅವರು ಭಾವಿಸುತ್ತಾರೆ. ಜಗತ್ತಿಗೂ ಯಾವ ಅರ್ಥವಿಲ್ಲ , ಜೀವನಕ್ಕೂ ಯಾವ ಅರ್ಥವಿಲ್ಲ ಎಂಬ ಮನೋಭಾವವನ್ನು ಈ ಧೋರಣೆಯು ಉಂಟುಮಾಡುತ್ತದೆ. ಹೀಗಾಗಿ ಅವರು ತಮ್ಮ ಜೀವನಕ್ಕೂ ಬೆಲೆ ಕೊಡದೆ, ಇತರರ ಜೀವನಕ್ಕೂ ಬೆಲೆ ಕೊಡದೆ ನಿರರ್ಥಕವಾದ ಐಶರಾಮಿ ಜೀವನವನ್ನು ನಡೆಸುತ್ತಾರೆ. ಪ್ರಸಿದ್ಧ ಮನಶಾಸ್ತ್ರಜ್ಞರಾದ ಸಿ.ಜಿ.ಯಂಗ್ ಅವರು ಹೇಳುತ್ತಾರೆ: 'ತನ್ನ ಜೀವನಕ್ಕೆ ಒಂದು ವಿಶಾಲ ಅರ್ಥವನ್ನು ಕಂಡುಕೊಂಡಾಗ ಮಾತ್ರ ವ್ಯಕ್ತಿಯು ಕೇವಲ ಗಳಿಸುವ ಮತ್ತು ವ್ಯಯಿಸುವ ಸ್ಥಿತಿಯನ್ನು ಮೀರಿ ಹೋಗಬಲ್ಲ. ಅವನು ಈ ಅರ್ಥವನ್ನು ಕಳೆದುಕೊಂಡರೆ ತನ್ನನ್ನೇ ಕಳೆದುಕೊಳ್ಳುತ್ತಾನೆ ಎಂದು ದುಃಖಪಡುತ್ತಾನೆ.'

ಇದರಿಂದಾಗಿಯೇ ಸ್ವಾಮಿ ವಿವೇಕಾನಂದರು ಆದರ್ಶದ ಮಹತ್ವವನ್ನು ಒತ್ತಿ ಹೇಳುತ್ತಾರೆ: ''ಆದರ್ಶವಿರುವ ವ್ಯಕ್ತಿಯು ಸಾವಿರ ತಪ್ಪುಗಳನ್ನು ಮಾಡುತ್ತಾನೆ. ಆದಕಾರಣ ಒಂದು ಆದರ್ಶವಿರುವುದು ಮೇಲು. ಈ ಆದರ್ಶವು ನಮ್ಮ ಹೃದ್ಗತವಾಗಿ ನಮ್ಮ ರಕ್ತನಾಳಗಳಲ್ಲೆಲ್ಲ ಸಂಚರಿಸಿ ಪ್ರತಿಯೊಂದು ರಕ್ತಕಣವೂ ಈ ಭಾವನೆಯಿಂದ ಅನುರಣಿತವಾಗಿ ನಮ್ಮ ದೇಹದ ಅಂಗೋಪಾಂಗಗಳಲ್ಲೆಲ್ಲ ಸಂಚರಿಸುವ ತನಕ ಅದನ್ನು ನಾವು ಕೇಳಬೇಕು. ನಾವು ಅದನ್ನು ಕುರಿತು ಧ್ಯಾನಿಸಬೇಕು.'' ಹೃದಯ ತುಂಬಿ ತುಳುಕಿದಾಗ ಮಾತು ಹೊಮ್ಮುತ್ತದೆ, ಕೈಗಳೂ ಕೆಲಸ ಮಾಡುತ್ತವೆ. *(ಸ್ವಾಮಿ ವಿವೇಕಾನಂದರ ಕೃತಿಶ್ರೇಣಿ, ಸಂ.೨, ಪು.೮೮)*

ಆಸುರೀಸಂಪತ್ತಿನವರು ತಣಿಸಲಾಗದಷ್ಟು ತೀವ್ರ ಆಸೆಗಳಿಂದ ಕೂಡಿರುತ್ತಾರೆ. ಒಂದು ಆಸೆಯನ್ನು ತೀರಿಸಿದರೆ ಅದು ಅನೇಕ ಆಸೆಗಳನ್ನು ಹುಟ್ಟುಹಾಕುತ್ತದೆ. ಅವರು ನೂರಾರು ಆಶಾಪಾಶಗಳಿಂದ ಬದ್ಧರಾಗಿರುತ್ತಾರೆ ಎಂದು ಶ್ರೀಕೃಷ್ಣನು ಹೇಳುತ್ತಾನೆ. ಈ ಆಸೆಗಳನ್ನು ತೀರಿಸಲು ಅನೈತಿಕ ಮಾರ್ಗಗಳನ್ನೂ ಅವರು ಅನುಸರಿಸಬೇಕಾಗುತ್ತದೆ. ಅವರು ಅನ್ಯಾಯದಿಂದ ಧನಸಂಗ್ರಹದಲ್ಲಿ ತೊಡಗುತ್ತಾರೆಂದು ಶ್ರೀಕೃಷ್ಣನು ಹೇಳುತ್ತಾನೆ. ಇದರಿಂದಾಗಿ ಅವರ ನಿಶ್ಚಯಗಳೆಲ್ಲವೂ ಅಶುಭವಾಗಿರುತ್ತದೆ. ನಿಶ್ಚಯವು ಇಚ್ಛಾಶಕ್ತಿಯ ಕೆಲಸ. ಅವರಲ್ಲಿ ಬಲವಾದ ಇಚ್ಛಾಶಕ್ತಿ ಇರುತ್ತದೆ, ಆದರೆ ಅದು ಆಸೆಗಳನ್ನು ಅನುಸರಿಸಿಕೊಂಡು ಹೋಗುತ್ತದೆ. ಕಾಮೋಪಭೋಗವೇ ಪರಮೋತ್ಕೃಷ್ಟವಾದುದು ಎಂದು ಅವರು ದೃಢನಿಶ್ಚಯ ಮಾಡಿಕೊಂಡಿರುತ್ತಾರೆ. ತಮ್ಮ ಇಚ್ಛಾಬಲದಿಂದ ಇತರರ ಮೇಲೆ ದಬ್ಬಾಳಿಕೆ ನಡೆಸುತ್ತಾರೆ, ಅಧಿಕಾರ ಮದದಿಂದ ಮೆರೆಯುತ್ತಾರೆ. ಆದ್ದರಿಂದ ಅವರು ದಂಭಮಾನಮದಾನ್ವಿತರಾಗಿರುತ್ತಾರೆಂದು ಶ್ರೀಕೃಷ್ಣನು ಹೇಳುತ್ತಾನೆ.

ಆಸುರೀಸಂಪತ್ತಿನ ಇನ್ನೊಂದು ಲಕ್ಷಣ ಹಿಂಸಾತ್ಮಕ ಪ್ರವೃತ್ತಿ. ಇತರರನ್ನು ಹಿಂಸಿಸುವುದರಲ್ಲಿಯೇ ಅವರು ಸಂತೋಷವನ್ನು ಕಾಣುತ್ತಾರೆ. ಇತರರನ್ನು ಕೊಲ್ಲುವುದೊಂದು ಅವರಿಗೆ ಮೋಜು. ಎರಡನೇ ಮಹಾಯುದ್ಧದ ಸಮಯದಲ್ಲಿ ಜರ್ಮನಿಯಲ್ಲಿ ನಾಜಿಗಳು (ಹಿಟ್ಲರ್ ಮತ್ತು ಅವನ ಅನುಯಾಯಿಗಳು) ಯಹೂದಿಗಳನ್ನು ಚಿತ್ರಹಿಂಸೆ ಕೊಟ್ಟು ಸಾಯಿಸುವುದರಲ್ಲಿಯೇ ಪರಮಾನಂದವನ್ನು ಅನುಭವಿಸುತ್ತಿದ್ದರು. ಇಂದಿನ ಭಯೋತ್ಪಾದಕರೂ ಇದೇ ವರ್ಗಕ್ಕೆ ಸೇರಿದವರು. ಹೀಗೆ ಸ್ಥೂಲರೀತಿಯಲ್ಲಿ ಹಿಂಸಿಸುವುದಲ್ಲದೆ ಅನೇಕರು ಸೂಕ್ಷ್ಮ ರೀತಿಯಲ್ಲಿ ಇತರರಿಗೆ ಅಹಿತವನ್ನು ಉಂಟುಮಾಡುತ್ತಾರೆ. ಮತ್ತೆ ಕೆಲವರು ಕಟುಮಾತಿನ ಮೂಲಕ ಚುಚ್ಚುಮಾತಿನ ಮೂಲಕ ದುರ್ವರ್ತನೆಗಳ ಮೂಲಕ ಮನ ನೋಯಿಸುತ್ತಾರೆ. ಇದರಿಂದ ನಾವು ವಿಚಲಿತರಾದಷ್ಟೂ ಅವರಿಗೆ ಆನಂದ, ಮತ್ತಷ್ಟೂ ಕಿರುಕುಳ ಕೊಡುತ್ತಾರೆ.

ಆಸುರೀಸಂಪತ್ತಿನವರು ಅನೇಕ ಚಿತ್ತವಿಭ್ರಾಂತರಾಗಿರುತ್ತಾರೆ ಎಂದು ಶ್ರೀಕೃಷ್ಣನು ಹೇಳುತ್ತಾನೆ. ಅಂದರೆ ಅವರಲ್ಲಿ ಒಂದು ಮನಸ್ಸಿರುವುದಿಲ್ಲ, ಅನೇಕ ಮನಸ್ಸುಗಳ ತಾಕಲಾಟಕ್ಕೆ ಒಳಗಾಗಿರುತ್ತಾರೆ. ಅವರು ಇಂದಿದ್ದಂತೆ ನಾಳೆ ಇರುವುದಿಲ್ಲ. ಇವತ್ತು ಒಂದು ಪಾರ್ಟಿ, ನಾಳೆ ಇನ್ನೊಂದು ಪಾರ್ಟಿ – ಹೀಗೆ ನೆಗೆಯುತ್ತಿರುತ್ತಾರೆ. ಅವರಲ್ಲಿ ಯಾವುದೇ ನಿರ್ದಿಷ್ಟವಾದ ಧೋರಣೆ ಇರುವುದಿಲ್ಲ. ಅನೇಕರಿಗೆ ಒಂದೇ ಅಹಂ ಇರುವುದಿಲ್ಲ – ಅನೇಕ ಅಹಂಗಳು ಇರುತ್ತವೆ. ದೇವಸ್ಥಾನದಲ್ಲಿ ಅವರು ತುಂಬಾ ಪ್ರಾಮಾಣಿಕ ಭಕ್ತರು. ಆದರೆ ವ್ಯಾಪಾರ ಕ್ಷೇತ್ರದಲ್ಲಿ ತುಂಬ ಮೋಸಗಾರರು. ಆಫೀಸಿನಲ್ಲಿ ಅವರು ಬಾಸರು, ಮನೆಯಲ್ಲಿ ಪತ್ನಿಯ ಮುಂದೆ ದಾಸರು. ಹೀಗೆ ಅವರು ಹಲವು ವ್ಯಕ್ತಿತ್ವಗಳಿಂದ ಭೂಷಿತರಾಗಿರುತ್ತಾರೆ. ಅದಕ್ಕಾಗಿಯೇ ಸ್ವಾಮಿ ವಿವೇಕಾನಂದರು, ಒಂದು ನಿರ್ದಿಷ್ಟವಾದ ಆದರ್ಶವನ್ನು ರೂಪಿಸಬೇಕೆಂದು ಕರೆಕೊಡುತ್ತಾರೆ. ನಮ್ಮಲ್ಲಿ ಒಂದು 'ಒಡೆಯ ಅಹಂ' ಇರಬೇಕು, ಮತ್ತು ಅದು ಬೇರೆಲ್ಲ ಅಹಂಗಳನ್ನೂ ತನ್ನ ಹಿಡಿತದಲ್ಲಿ ಇಟ್ಟುಕೊಂಡಿರಬೇಕು. ಉದಾಹರಣೆಗೆ ಆಧ್ಯಾತ್ಮಿಕ ಸಾಧಕರು 'ನಾನು ಆಧ್ಯಾತ್ಮಿಕ ಸಾಧಕ' ಎಂಬ ಬಲವಾದ ಅಹಂ ಅನ್ನು ಬೆಳೆಸಿಕೊಳ್ಳಬೇಕು, ಯಾವಾಗಲೂ ತಾನು ಆಧ್ಯಾತ್ಮಿಕ ಸಾಧಕ ಎಂದು ಭಾವಿಸುತ್ತಿರಬೇಕು. ಈ ಭಾವನೆ ಅವನ ಎಲ್ಲ ನಡೆನುಡಿಗಳನ್ನೂ ನಿಯಂತ್ರಿಸುತ್ತಿರಬೇಕು, ಎಲ್ಲ ಕ್ಷೇತ್ರಗಳಲ್ಲೂ ಅವನು ಆಧ್ಯಾತ್ಮಿಕ ಸಾಧಕನೇ ಆಗಿರಬೇಕು, ಈ ತನ್ನತನ (self identity) ಬದಲಾಗಲೇಬಾರದು. ಪ್ರತಿಯೊಂದು ಸಂದರ್ಭದಲ್ಲಿಯೂ ತಾನು ಆಧ್ಯಾತ್ಮಿಕ ಸಾಧಕನಾಗಿ ಹೇಗೆ ವರ್ತಿಸಬೇಕು, ಹೇಗೆ ಮಾತನಾಡಬೇಕು, ಹೇಗೆ ಚಿಂತಿಸಬೇಕು ಮತ್ತು ಹೇಗೆ ಕಾರ್ಯನಿರ್ವಹಿಸಬೇಕು ಎಂದು ತನ್ನನ್ನು ತಾನೇ ಪ್ರಶ್ನಿಸುತ್ತ ಅವನು ಜೀವನ ನಿರ್ವಹಿಸಬೇಕು.

ಕಾಳಿದಾಸನ ಒಂದು ಹೇಳಿಕೆ ಇಲ್ಲಿ ಸ್ಮರಣೀಯ: **ಸತಾಂ ಹಿ ಸಂದೇಹಪದೇಷು ವೃತ್ತಿಷು ಪ್ರಮಾಣಮಂತಃಕರಣಪ್ರವೃತ್ತಯಃ** – ಸತ್ಪುರುಷರಿಗೆ ಕಾರ್ಯಾಕಾರ್ಯವಿಷಯದಲ್ಲಿ ಸಂದೇಹವುಂಟಾದರೆ ಅವರು ತಮ್ಮ ಅಂತರಂಗದ ಧ್ವನಿಯನ್ನೇ ಅನುಸರಿಸಬೇಕು.

ಕೆಲವರು ಶಾಸ್ತ್ರಾಧಾರವನ್ನು ನೀಡಿ ತಮ್ಮ ಕೃತಿಯನ್ನು ಸಮರ್ಥಿಸಿಕೊಳ್ಳಬಹುದು. 'ರಾಕ್ಷಸರೂ ಶಾಸ್ತ್ರವನ್ನು ಉದ್ಧರಿಸಬಲ್ಲರು (devils can quote the scriptures)' ಎಂಬ ಆಂಗ್ಲ ನಾಣ್ಣುಡಿಯೊಂದಿದೆ. ಇನ್ನು ಕೆಲವು ಸಂದರ್ಭಗಳಲ್ಲಿ ತಮ್ಮ ವರ್ತನೆ ಯನ್ನು ಮಹಾಪುರುಷರ ಯಾವುದೋ ಹೇಳಿಕೆಯನ್ನೂ ಜೀವನ ಘಟನೆಯನ್ನೂ ಉದ್ಧರಿಸಿ ಸಮರ್ಥಿಸಿಕೊಳ್ಳಬಹುದು. ಆದರೆ ಅಂತಃಸಾಕ್ಷಿ ಮಾತ್ರ ನೀನು ಮಾಡುತ್ತಿರುವುದು ತಪ್ಪು ಎಂದು ಹೇಳುತ್ತಿರುತ್ತದೆ. ಆದ್ದರಿಂದ ಉನ್ನತ ಆದರ್ಶವನ್ನು ಪ್ರತಿಧ್ವನಿಸುವ ಅಂತಸಾಕ್ಷಿಯೇ ನಮಗೆ ಎಲ್ಲ ಸಂದರ್ಭಗಳಲ್ಲಿಯೂ ಪ್ರಮಾಣ ವಾಗಿರಬೇಕು.

ಪ್ರತಿಯೊಂದು ಸಂದರ್ಭದಲ್ಲಿಯೂ ನಮ್ಮ ವರ್ತನೆಗಳಿಗೆ ನಾಲ್ಕು ಆಧಾರಗಳಿವೆ ಎಂದು ಸ್ವಾಮಿ ತ್ಯಾಗೀಶಾನಂದರು ಹೇಳುತ್ತಾರೆ: ಶ್ರುತಿ, ಸ್ಮೃತಿ, ಆತ್ಮತುಷ್ಟಿ,(ಅಂತಃಸಾಕ್ಷಿ) ಮತ್ತು ಶಿಷ್ಟಾಚಾರ (ಹಿರಿಯರ ಮಾರ್ಗ). ಇವುಗಳೆಲ್ಲವನ್ನೂ ವಿಸ್ತಾರವಾಗಿ ವಿಶ್ಲೇಷಿಸುತ್ತ ಕೊನೆಯಲ್ಲಿ ಅವರು ಹೇಳುವ ಮಾತು ಸ್ವಾಮಿ ವಿವೇಕಾನಂದರ ಉಕ್ತಿಗಳಂತೆಯೇ ಇವೆ: ''ಸಂಪ್ರದಾಯನಿಷ್ಠ ವ್ಯಕ್ತಿಗಳು ತಮ್ಮ ನೈತಿಕ ಪ್ರಜ್ಞೆಯನ್ನೂ ಆಯ್ಕೆಯ ಸ್ವಾತಂತ್ರ್ಯವನ್ನೂ ಕಡೆಗಣಿಸಿ ಬಾಹ್ಯ ಪ್ರಮಾಣವನ್ನೇ ಅನುಸರಿಸಲು ಬಯಸುತ್ತಾರೆ. ಕೇವಲ ಇತರರನ್ನೇ ಅನುಸರಿಸುತ್ತಿದ್ದರೆ ಮತ್ತು ಧರ್ಮದ ವಿಷಯದಲ್ಲಿ ಇತರರ ನಿರ್ಣಯವನ್ನೇ ಅವಲಂಬಿಸಿಕೊಂಡಿದ್ದರೆ, ಒಬ್ಬ ವ್ಯಕ್ತಿಯು ನೈತಿಕವಾಗಿ ದುರ್ಬಲನಾಗುತ್ತ ಹೋಗುತ್ತಾನೆ. ಏಕೆಂದರೆ ತನ್ನ ನೈತಿಕ ಪ್ರಜ್ಞೆಗೆ ಯಾವುದೇ ಕೆಲಸವೂ ಇಲ್ಲದಂತಾಗುವುದರಿಂದ. ದೇಹದ ವಿವಿಧ ಅಂಗಗಳನ್ನು ನಿರಂತರವಾಗಿಯೂ ಸರಿಯಾಗಿಯೂ ಉಪಯೋಗಿಸದಿದ್ದರೆ ಅವು ಕ್ರಮೇಣ ದುರ್ಬಲವಾಗಿ ಕೊನೆಗೆ ಅವು ಸಂಪೂರ್ಣ ನಿಷ್ಕ್ರಿಯವಾಗಿಬಿಡುತ್ತವೆ. ಇದರಂತೆಯೇ ಸ್ವಂತ ನೈತಿಕ ಪ್ರಜ್ಞೆಯೂ ಕೂಡ.

''ಇದೇ ಕಾರಣದಿಂದಾಗಿಯೇ ಹಿಂದೂ ಸಾಂಪ್ರದಾಯಿಕ ಸಮಾಜವು ನೈತಿಕತೆ ಮತ್ತು ಧರ್ಮವು ಅವನತಿಯನ್ನು ಹೊಂದಿ, ಸಮಾಜವು ನೈತಿಕವಾಗಿಯೂ ಆಧ್ಯಾತ್ಮಿಕವಾಗಿಯೂ ಸಂಪೂರ್ಣ ದುರ್ಬಲವಾಯಿತು. ಮೇಲೆ ಪ್ರಸ್ತಾಪಿಸಿದ ನಾಲ್ಕು ಧರ್ಮಾಧಾರಗಳಲ್ಲಿ, ಯಾವುದು ಮುಖ್ಯ, ಯಾವುದು ಗೌಣ ಎಂಬುದರ ತುಲನಾತ್ಮಕ ಜ್ಞಾನ ಅವರಿಗಿದ್ದಿದ್ದರೆ ಮತ್ತು ತಮ್ಮ ಆತ್ಮತುಷ್ಟಿಯ ಆಧಾರದ ಮೇಲೆ ತಮ್ಮ ಆಯ್ಕೆಯ ಸ್ವಾತಂತ್ರ್ಯವನ್ನು ಉಪಯೋಗಿಸಿದ್ದಿದ್ದರೆ, ಅವರ ನೈತಿಕಪ್ರಜ್ಞೆಯು, ನಿರಂತರ ಉಪಯೋಗಿಸಿದುದರ ಮೂಲಕ, ಕ್ರಮೇಣ ಬಲಯುತವಾಗುತ್ತಿತ್ತು ಮತ್ತು ತಮ್ಮ ಶಕ್ತಿಯ ಆಧಾರದ ಮೇಲೆಯೇ ತಾವು ನಿಂತುಕೊಳ್ಳುವ ಸಾಮರ್ಥ್ಯ ವನ್ನು ಪಡೆಯುತ್ತಿದ್ದರು – ನಮ್ಮನ್ನಾಳಲು ಬಂದ ವಿದೇಶಿಯರು ಒದಗಿಸಿದ ದುರ್ಬಲ ಊರುಗೋಲುಗಳನ್ನು ಆಶ್ರಯಿಸಿಕೊಂಡಿರಬೇಕಾದ ಪರಿಸ್ಥಿತಿ ಉಂಟಾಗುತ್ತಿರಲಿಲ್ಲ.

''ಹಿಂದೂಗಳು ನಾಚಿಕೆಯಿಲ್ಲದೆ ಪಾಶ್ಚಿಮಾತ್ಯರ ನಡೆನುಡಿ ಆಚಾರಗಳನ್ನು ಅವರ ನ್ಯಾಯ ಮತ್ತು ನೀತಿಯ ಭಾವನೆಗಳನ್ನೂ ಅನುಕರಿಸುತ್ತಿರುವ ಈ ಶೋಚನೀಯ ಪರಿಸ್ಥಿತಿಗೆ ಕಾರಣ ಅವರು ತಮ್ಮ ಸ್ವಂತ ನೈತಿಕಪ್ರಜ್ಞೆಯನ್ನು ಪ್ರಯೋಗಿಸದೆ ಆ ನೈತಿಕ ಬೆನ್ನೆಲುಬು ದುರ್ಬಲಗೊಂಡುದೇ ಕಾರಣವೆನ್ನಬಹುದು. ಮನೆಗಳಲ್ಲಿಯೇ ಈ ರೀತಿ ಆಗುತ್ತಿರುವುದನ್ನು ಕಾಣಬಹುದು. ಕಲಿಯುವ ಮಕ್ಕಳಿಗೆ ಸ್ವಪ್ರಯತ್ನಕ್ಕೆ ಅವಕಾಶವೇ ಇಲ್ಲದಂತೆ ಗಿಳಿಪಾಠ ಮಾಡಿಸುವುದು (Spoon feeding) ಅತಿ ಅಕ್ಕರೆಯಿಂದ ಮಕ್ಕಳನ್ನು ಮುದ್ದಿಸಿ ಸಾಕುವುದರಿಂದ ಮುಂದೆ ಆ ಮಕ್ಕಳ ಭವಿಷ್ಯ ಏನಾಗುತ್ತದೆ ಎಂಬುದು ನಮಗೆಲ್ಲರಿಗೂ ತಿಳಿದಿರುವ ವಿಷಯ. ಮಕ್ಕಳ ನೈತಿಕತೆ ಬೆಳವಣಿಗೆಯ ದೃಷ್ಟಿಯಿಂದ ಅವರಿಗೆ ಸಾಕಷ್ಟು ಸ್ವಾತಂತ್ರವನ್ನು ನೀಡುವುದು ಅತ್ಯಂತ ಅವಶ್ಯಕ. ಸ್ವತಂತ್ರವಾಗಿ ಚಿಂತಿಸುವುದಕ್ಕೆ, ಮತ್ತು ನಿರ್ಣಯಿಸುವುದಕ್ಕೆ ಅವಕಾಶ ನೀಡಬೇಕು. ತುಂಬ ಆವಶ್ಯಕವಿದ್ದಾಗ ಮಾತ್ರ ಹಿರಿಯರು ಮಧ್ಯೆ ಪ್ರವೇಶಿಸಬೇಕು. ಈ ದೃಷ್ಟಿಯಿಂದ ಶ್ರೀಕೃಷ್ಣನ 'ಸ್ವಧರ್ಮವೇ ಶ್ರೇಯಸ್ಕರ ಮತ್ತು ಪರಧರ್ಮವು ಭಯಾನಕ' ಎಂಬ ಹೇಳಿಕೆಯ ಮಹತ್ವವನ್ನು ಅರ್ಥಮಾಡಿಕೊಳ್ಳಬಹುದು.'' ನೋಡಿ: (*Isha vasya Upanishad and the True Import of Dharma*, Viveka Hamsa, Bangalore, P 216 – 243)

ಆತ್ಮತುಷ್ಟಿಯನ್ನು ಅನುಸರಿಸಬೇಕು ಎಂದ ಮಾತ್ರಕ್ಕೆ ಶಾಸ್ತ್ರವನ್ನಾಗಲೀ ಶಿಷ್ಟಾಚಾರವನ್ನಾಗಲಿ ಅನುಸರಿಬಾರದೆಂದಲ್ಲ. ಶಾಸ್ತ್ರ ಮತ್ತು ಶಿಷ್ಟಾಚಾರಗಳನ್ನೂ ಕೂಡ ಆತ್ಮತುಷ್ಟಿಗೆ ಅನುಗುಣವಾಗಿ ಅನುಸರಿಸಬೇಕು. ನಮ್ಮ ಜೀವನದಲ್ಲಿ ಎಷ್ಟೋ ಸಂದರ್ಭಗಳಲ್ಲಿ ಕಾರ್ಯಾಕಾರ್ಯ ವಿಷಯದಲ್ಲಿ ಗೊಂದಲವುಂಟಾಗುವುದು ಸಹಜ. ಆಗ ನಾವು ಶಾಸ್ತ್ರವನ್ನು ಪರಿಶೀಲಿಸಬೇಕಾಗಬಹುದು ಅಥವಾ ಅನುಭವಸ್ಥರನ್ನು ವಿಚಾರಿಸಬೇಕಾಗಬಹುದು. ಆಗ ನಾವು ನಮಗೆ ನಾವೇ ಪ್ರಾಮಾಣಿಕರಾಗಿರದಿದ್ದರೆ, ನಮ್ಮ ನೈತಿಕ ಪ್ರಜ್ಞೆಗೆ ನಾವು ಬೆಲೆ ಕೊಡದಿದ್ದರೆ, ನಮ್ಮ ಆಸೆ ಆಕಾಂಕ್ಷೆಗಳಿಗೆ ಪೂರಕವಾದ ಶಾಸ್ತ್ರದ ಹೇಳಿಕೆಯನ್ನೇ ಸ್ವೀಕರಿಸಿಬಿಡುತ್ತೇವೆ, ಅಥವಾ ಅನುಭವಸ್ಥರ ಮುಂದೆ ನಮ್ಮ ನಿಜವಾದ ಪರಿಸ್ಥಿತಿಯನ್ನು ಯಥಾರ್ಥವಾಗಿ ಹೇಳುವುದೇ ಇಲ್ಲ. ಆದ್ದರಿಂದ ಆತ್ಮತುಷ್ಟಿಯನ್ನು ಕಡೆಗಣಿಸುವವರು ಶಾಸ್ತ್ರವನ್ನಾಗಲೀ ಶಿಷ್ಟಾಚಾರವನ್ನಾಗಲಿ ಸರಿಯಾಗಿ ಅನುಸರಿಸಲಾರರು. ಯಾರ ನೈತಿಕಪ್ರಜ್ಞೆಯು ಸ್ಪಷ್ಟವಾಗಿರುತ್ತದೆಯೋ (clear conscience) ಅಂಥವರಿಗೆ ಮಾತ್ರ ಶಾಸ್ತ್ರವು ಪ್ರಮಾಣವಾಗಬಲ್ಲುದು. ಅಂಥವರಿಗೆ ಶ್ರೀಕೃಷ್ಣನು ಹೇಳುವ ಕಿವಿಮಾತು ಇದು. 'ಆದುದರಿಂದ ಕಾರ್ಯ–ಅಕಾರ್ಯ ಇವುಗಳ ನಿರ್ಧಾರಣೆಯಲ್ಲಿ ಶಾಸ್ತ್ರವೇ ನಿನಗೆ ಪ್ರಮಾಣ. ಶಾಸ್ತ್ರವಿಧಿಯನ್ನು ತಿಳಿದುಕೊಂಡು ಅದರಂತೆ ಕರ್ಮ ಮಾಡು.' *(೧೬.೨೪)*

ಹೀಗೆ ಆಸುರೀಸಂಪತ್ತನ್ನು ವಿವರಿಸಿ ಕೊನೆಯಲ್ಲಿ ಒಂದು ಮುಖ್ಯ ವಿಷಯವನ್ನು ಶ್ರೀಕೃಷ್ಣನು ಹೇಳುತ್ತಾನೆ:

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜ॥**

'ಕಾಮಕ್ರೋಧ ಮತ್ತು ಲೋಭ – ಇವು ನರಕದ ಮೂರು ಬಾಗಿಲುಗಳು. ಇವು ವ್ಯಕ್ತಿಯನ್ನು ನಾಶಮಾಡುತ್ತವೆ. ಆದ್ದರಿಂದ ಈ ಮೂರನ್ನು ತ್ಯಜಿಸು.'

ನರಕಕ್ಕೆ ಅನೇಕರು ಧಾವಿಸುತ್ತಿರುವುದರಿಂದ ಸ್ಟಾಂಪೇಡ್ ಆಗದಿರಲೆಂದು ಮೂರು ಬಾಗಿಲುಗಳಿವೆಯಂತೆ. ಇವಲ್ಲದೆ ಇನ್ನೂ ಸಂದಿಗೊಂದಿಗಳು ಅನೇಕವಿವೆ. ಇಷ್ಟಲ್ಲದೆ ನರಕಕ್ಕೆ ಟಿಕೆಟ್ ಕೂಡ ಇದೆ. ನಮ್ಮ ಅಲ್ಪ ಪುಣ್ಯದ ಫಲವನ್ನೂ ತೆತ್ತು ಆ ಟಿಕೆಟ್ ಕೊಂಡುಕೊಳ್ಳಬೇಕು. ಸ್ವರ್ಗಕ್ಕೆ ಹೋಗುವವರು ಕಡಿಮೆಯಾದುದರಿಂದ ಅದಕ್ಕೆ ಒಂದೇ ಬಾಗಿಲು, ಅದೂ ತುಂಬ ಚಿಕ್ಕದು. ಆದರೆ ಪ್ರವೇಶ ಉಚಿತ. ಆ ಒಂದು ಬಾಗಿಲು ಯಾವುದೆಂದರೆ ಸಂಪೂರ್ಣ ನಿಃಸ್ವಾರ್ಥ.

ಕಾಮವೆಂದರೆ ಭೋಗಾಸಕ್ತಿ, ಕ್ರೋಧವೆಂದರೆ ಹಿಂಸಾತ್ಮಕ ಪ್ರವೃತ್ತಿ ಮತ್ತು ಲೋಭವೆಂದರೆ ಸ್ವಾಧೀನತಾ ಪ್ರವೃತ್ತಿ, ಅಂದರೆ ಎಲ್ಲವೂ ತನಗೆ ಬೇಕು, ತನ್ನದಾಗಿರಬೇಕು ಎಂಬ ಒಡೆತನದೊಲವು. ಇವುಗಳಲ್ಲಿ ಮೊದಲನೆಯದು ದೇವತೆಗಳ ಸ್ವಭಾವ. ಅವರು ಸ್ವರ್ಗದಲ್ಲಿ ಇಂದ್ರಿಯಸುಖದಲ್ಲಿಯೇ ಮತ್ತರಾಗಿರುತ್ತಾರೆ ಎಂದು ಹೇಳುತ್ತಾರೆ. ಎರಡನೆಯದು ರಾಕ್ಷಸವೃತ್ತಿ, ಮತ್ತು ಮೂರನೆಯದು ಮನುಷ್ಯ ಸ್ವಭಾವ.

ಬೃಹದಾರಣ್ಯಕ ಉಪನಿಷತ್ತಿನಲ್ಲಿ ಒಂದು ಸ್ವಾರಸ್ಯಕರ ಕಥೆ ಬರುತ್ತದೆ. ಒಮ್ಮೆ ದೇವ ದಾನವ ಮಾನವರು ಮೂವರೂ ಪ್ರಜಾಪತಿಯ ಬಳಿ ಉಪದೇಶಕ್ಕಾಗಿ ಹೋದರು. ಪ್ರಜಾಪತಿಯು ಇಂದಿನ ಉಪನ್ಯಾಸಕರಂತಲ್ಲ, ಅವನು ಮಿತಭಾಷಿ. ಅವನು 'ದ' ಎಂಬ ಒಂದಕ್ಕರದ ಉಪದೇಶ ನೀಡಿದ. ಈ ಮೂವರೂ ತಮ್ಮ ತಮ್ಮ ಸ್ವಭಾವಕ್ಕೆ ಅನುಗುಣವಾಗಿ 'ದ' ಅಕ್ಷರವನ್ನು ಅರ್ಥೈಸಿಕೊಂಡರು. ದೇವತೆಯದು ಭೋಗ ಪ್ರವೃತ್ತಿ. ಅವನು 'ದ' ಎಂದರೆ 'ದಾಮ್ಯತಾಂ' ಎಂದರೆ ನಿನ್ನ ಭೋಗಾಸಕ್ತಿಯನ್ನು ನಿಗ್ರಹಿಸು ಎಂದು ಅರ್ಥೈಸಿದನು. ದಾನವನ ಸ್ವಭಾವ ಹಿಂಸಿಸುವುದಾದ್ದರಿಂದ ಅವನು ಅರ್ಥೈಸಿಕೊಂಡ, 'ದ' ಎಂದರೆ 'ದಯಧ್ವಂ' – ದಯೆ ತೋರು – ಎಂದು. ಲೋಭಸ್ವಭಾವದ ಮಾನವನು 'ದ' ಅಕ್ಷರಕ್ಕೆ 'ದತ್ತ' – ದಾನಮಾಡು – ಎಂಬುದಾಗಿ ಅರ್ಥೈಸಿದನು. ಮಾನವನಲ್ಲಿಯೇ ಈ ಮೂರೂ ಸ್ವಭಾವಗಳೂ ಇರುವುದರಿಂದ ಈ ಮೂರು ಅರ್ಥಗಳು ಅವನಿಗೆ ಅನ್ವಯಿಸುತ್ತವೆ. ಈ ಮೂರು ಸ್ವಭಾವಗಳು ನಿಜವಾಗಿಯೂ ಆಸುರೀಸಂಪತ್ತು. ಇವುಗಳನ್ನು ನಿಗ್ರಹಿಸಿದರೆ ಮಾನವನು ದೈವೀಸಂಪತ್ತಿನವನಾಗುತ್ತಾನೆ. ✴

## ಸಿಂಹಕ್ಕೆ ಅಂಜದೆ ಸೊಳ್ಳೆಗಂಜುವರೆ !

**ವೇ**ದಪುರವೆಂಬ ಪಟ್ಟಣದಲ್ಲಿ ಶಿವಲಿಂಗಸ್ವಾಮಿಗಳೆಂಬ ಒಬ್ಬ ಸದ್ಗುರುಗಳಿದ್ದರು. ಒಮ್ಮೆ ಅವರು ಗ್ರಾಮಸಂಚಾರ ಮಾಡುವಾಗ ದಟ್ಟವಾದ ಅರಣ್ಯವೊಂದರ ಮೂಲಕ ಸಾಗಿ ಹೋಗಬೇಕಾಯಿತು. ಆ ಹೊತ್ತಿನಲ್ಲಿ ಅವರೊಡನೆ ಘನಾನಂದವೆಂಬ ಶಿಷ್ಯನೂ ಇದ್ದನು. ದಾರಿ ನಡೆಯುವಾಗ ಮಧ್ಯಾಹ್ನದ ಶಿವಪೂಜೆಯ ಕಾಲ ಸಮೀಪಿಸಿತು. ಆಗ ಗುರುಶಿಷ್ಯರಿಬ್ಬರೂ ಅಲ್ಲಿಯೇ ಒಂದು ಮರದ ಬುಡದಲ್ಲಿ ಕಂಥೆ ಹಾಸಿ ಕುಳಿತುಕೊಂಡು, ಶಿವಪೂಜೆಯಲ್ಲಿ ಮಗ್ನರಾದರು. ಅಷ್ಟರಲ್ಲಿಯೇ ಸಮೀಪದಲ್ಲೆಂಬಂತೆ ಮೃಗರಾಜ ಸಿಂಹದ ಗರ್ಜನೆ ಕೇಳಿಸಿತು. ಅದು ತಮ್ಮತ್ತಲೇ ಬರುತ್ತಿರುವಂತೆ ಶಿಷ್ಯನಿಗೆ ಭಾಸವಾಯಿತು. ಅವನಿಗೆ ಜೀವವೇ ಹೋದಂತಾಗಿ ಪೂಜೆಯಿಂದೆದ್ದು, ಅಲ್ಲಿಯೇ ಸರಸರನೆ ಮರವೇರಿ ಕುಳಿತುಬಿಟ್ಟನು. ಶಿವಲಿಂಗ ಗುರುಗಳು ಮಾತ್ರ ಸ್ವಲ್ಪವೂ ಭಯಪಡದೆ ಶಿವಪೂಜೆಯಲ್ಲಿ ಮೈಮರೆತಿದ್ದರು. ಘನಾನಂದನು ನಿರೀಕ್ಷಿಸಿದಂತೆ ಸಿಂಹವು ಅವರ ಸಮೀಪಕ್ಕೆ ಬಂದು ನಿಂತಿತು. ಪೂಜಾರಸಮಗ್ನರಾಗಿದ್ದ ಗುರುಗಳನ್ನು ನೋಡಿತು. ಶಿಷ್ಯನ ಎದೆ ಡವಡವ ಎನ್ನುತ್ತಿತ್ತು. ಆದರೆ ಸಿಂಹವು ಗುರುಗಳನ್ನು ನೋಡಿಯೂ ಅವರ ಮೇಲೆರಗದೆ ತನ್ನಷ್ಟಕ್ಕೆ ತಾನು ಹೊರಟು ಹೋಯಿತು.

ಘನಾನಂದನಿಗೆ ಹೋದ ಜೀವ ಬಂದಂತಾಯಿತು. ಮೆಲ್ಲನೆ ಮರದಿಂದ ಕೆಳಗಿಳಿದು ಬಂದನು. ಪೂಜೆ ಮುಗಿದು ಪ್ರಯಾಣವು ಮುಂದುವರೆಯಿತು. ಮಾತಿಲ್ಲ ಕಥೆಯಿಲ್ಲ, ಮೌನವೋ ಮೌನ. ದಾರಿ ಸಾಗುವಾಗ ಕಾಡುಸೊಳ್ಳೆಯೊಂದು ಗುರುಗಳ ಕೆನ್ನೆಯ ಮೇಲೆ ಕುಳಿತು ಕಚ್ಚತೊಡಗಿತು. ಆಗ ಗುರುಗಳು ಫಟಾರನೇ ತಮ್ಮ ಕೆನ್ನೆಗೆ ಹೊಡೆದುಕೊಂಡು ಆ ಸೊಳ್ಳೆಯನ್ನು ಅಪ್ಪಚ್ಚಿಮಾಡಿಬಿಟ್ಟರು. ಅದನ್ನು ಕಂಡ ಶಿಷ್ಯನಿಗೆ ಮನದಲ್ಲಿ ಏನೋ ಸಂದೇಹವೊಂದು ಸುಳಿದು ಹೋಯಿತು. ಒಡನೆಯೇ ಮೌನ ಮುರಿದು ಗುರುಗಳನ್ನು ಕುರಿತು, ''ಸದ್ಗುರುವೇ, ನನ್ನನ್ನು ಕ್ಷಮಿಸು, ನನಗೊಂದು ಸಂದೇಹ ಬಂದಿದೆ'' ಎಂದನು. ''ಅದೇನು ಕೇಳಪ್ಪಾ'' ಎಂದು ಸದ್ಗುರುಗಳು ಅನುಮತಿಯಿತ್ತರು. ''ಸದ್ಗುರುವೆ, ಸಿಂಹವೇ ನಿನ್ನ ಸಮೀಪಕ್ಕೆ ಬಂದರೂ ಅಂಜದ ಗಂಡೆದೆ ನಿನ್ನದು. ಆದರೆ ಯಕಶ್ಚಿತ್ ಕಾಡುಸೊಳ್ಳೆಯೊಂದು ಕಚ್ಚುವಾಗ ಸಹಿಸಿಕೊಳ್ಳಲಾರದೆ ಕೋಪಗೊಂಡು ಕೊಂದೆಯಲ್ಲ, ಹೀಗೇಕೆ ಮಾಡಿದೆ? ನನ್ನ ಈ ಸಂದೇಹವನ್ನು ಪರಿಹರಿಸು'' ಎಂದು ಕೇಳಿಕೊಂಡನು. ಆಗ ಶಿವಲಿಂಗಸ್ವಾಮಿಗಳು, ''ಅಯ್ಯಾ ಶಿಷ್ಯನೇ, ನೀನು ಕೇಳಿರುವ ಪ್ರಶ್ನೆ ಉತ್ತರಿಸಲು ಯೋಗ್ಯವಾಗಿದೆಯಪ್ಪಾ! ಸಿಂಹವು ನನ್ನ ಸಮೀಪಕ್ಕೆ ಬಂದಾಗ ನಾನು ಪರಮಾತ್ಮನ ಸಂಗದಲ್ಲಿದ್ದೆ, ಆದ್ದರಿಂದ ಅಂಜುವ ಪ್ರಮೇಯವಿರಲಿಲ್ಲ. ಈ ಸೊಳ್ಳೆ ಕೆನ್ನೆಯನ್ನು ಕಚ್ಚುವಾಗ ನಾನು ಶಿಷ್ಯರೂಪದ ಒಬ್ಬ ಮನುಷ್ಯನೊಡನಿದ್ದೆ. ಈ ವ್ಯತ್ಯಾಸವನ್ನು ನೀನು ತುಲನೆ ಮಾಡಿದೆಯಾದರೆ ನಿನ್ನ ಸಂದೇಹಕ್ಕೆ ಉತ್ತರ ಲಭಿಸುತ್ತದೆ'' ಎಂದು ತಿಳಿಯಹೇಳಿದರು. ಅದು ತನ್ನ ಬುಡಕ್ಕೆ ಬಂದುದನ್ನರಿತ ಶಿಷ್ಯನು ನಾಚಿ, ತಲೆತಗ್ಗಿಸಿದನು.

*(ಹಿಂದಿ: 'ಪ್ರೇರಕ ಪ್ರಸಂಗ', ಅನು: ಡಾ. ಕೆ. ಅನಂತರಾಮು)*

# ಜಿ.ಎಸ್.ಜಯದೇವ ಅವರ 'ಜಾಗತೀಕರಣ, ಶಿಕ್ಷಣ ಮತ್ತು ಸಮಾಜ'

– ಡಾ. ಹೆಚ್. ಪಾಂಡುರಂಗ ವಿಠಲ




**ಜಾಗತೀಕರಣ, ಶಿಕ್ಷಣ ಮತ್ತು ಸಮಾಜ**

ಲೇಖಕರು : ಜಿ.ಎಸ್. ಜಯದೇವ

ಪ್ರಕಾಶಕರು : ಅಭಿರುಚಿ ಪ್ರಕಾಶನ, ೩೮೬, ೧೪ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಸರಸ್ವತಿಪುರಂ, ಮೈಸೂರು – ೫೭೦ ೦೦೯

ಪುಟಗಳು : ೧೬೮, ಬೆಲೆ : ೧೩೦

**ಕ**ನ್ನಡ ಮಾಧ್ಯಮವನ್ನು ಪೋಷಕರು ಏಕೆ ನಿರಾಕರಿಸುತ್ತಿದ್ದಾರೆ? ನೈತಿಕ ಶಿಕ್ಷಣ ಏಕೆ ವಿಫಲವಾಗಿದೆ? ಹುಡುಗರು ಏಕೆ ವಿಜ್ಞಾನ ಕಲಿಯಲು ಬಯಸುತ್ತಿಲ್ಲ? ಈಗಲೂ ಶಾಲೆ ತೊರೆಯುವವರ ಸಂಖ್ಯೆ ಹೆಚ್ಚಿದೆ ಏಕೆ? ಜಗತ್ತಿನ ತಾಪಮಾನ ಏರಿಕೆ ನಿಲ್ಲಿಸುವ ಪ್ರಯತ್ನವನ್ನು ಜನ ಒಟ್ಟಾಗಿ ಮಾಡುತ್ತಿಲ್ಲ ಏಕೆ?

ಈ ಪ್ರಶ್ನೆಗಳಿಗೂ, ಶಿಕ್ಷಣದ ಬಗೆಗಿನ ಇತರ ಸಮಸ್ಯೆಗಳಿಗೂ ಸಂಬಂಧಿಸಿದಂತೆ ಪತ್ರಿಕೆಗಳಲ್ಲಿ ಬೇಕಾದಷ್ಟು ಚರ್ಚೆ ನಡೆದಿದೆ. ಗ್ರಾಮೀಣ ಶಾಲೆಗಳು ಮತ್ತು ಶಿಕ್ಷಣದ ಬಗೆಗಿನ ತಮ್ಮ ದಶಕಗಳ ಅನುಭವದಿಂದ ಹೊಸ ವಿಚಾರಗಳನ್ನು ಜಿ.ಎಸ್. ಜಯದೇವ ಅವರು ತಮ್ಮ ಲೇಖನಗಳ ಈ ಸಂಗ್ರಹದಲ್ಲಿ ನೀಡಿದ್ದಾರೆ. ಸ್ವಾತಂತ್ರ್ಯಾನಂತರದ ನಮ್ಮ ಶಿಕ್ಷಣದ ಇತಿಹಾಸವೇ ಇಲ್ಲಿ ನಮ್ಮ ಕಣ್ಮುಂದೆ ನಿಲ್ಲುತ್ತದೆ.

ಬದುಕಲು ಬೇಕಾದ ಕೌಶಲ್ಯಗಳನ್ನು ಮಕ್ಕಳಿಗೆ ಕಲಿಸುತ್ತಿದ್ದೇವೆಯೆ ಎಂಬುದು ಮೊದಲ ಲೇಖನದ ವಸ್ತು. ಜಾಗತೀಕರಣ ಮತ್ತು ಎಣೆಯಿಲ್ಲದ ತಾಂತ್ರಿಕ ಪ್ರಗತಿ ಮನುಷ್ಯನ ದುರಾಸೆಗಳನ್ನು ಬಡಿದೆಬ್ಬಿಸಿ, ಇಡೀ ಸಮಾಜದಲ್ಲಿ ಅತೃಪ್ತಿ ಹರಡಿದೆ. ಪೋಷಕರ ಕನಸುಗಳನ್ನು ನನಸು ಮಾಡುವಂತೆ ಭ್ರಮೆ ಹುಟ್ಟಿಸುವ ಶಿಕ್ಷಣ ಮಾರುಕಟ್ಟೆಯಲ್ಲಿ ಲಭ್ಯವೆಂಬಂತೆ, ತಮ್ಮ ಮಕ್ಕಳಿಗೆ ಮೊದಲ ತರಗತಿಯಿಂದಲೆ ಇಂಗ್ಲಿಷ್ ಕಲಿಸುವ ಶಾಲೆಗಳನ್ನು ಹುಡುಕುತ್ತಾರೆ. ಮಣ್ಣಿನ ಒಡನಾಟದ ಸರಳ ಜೀವನದಲ್ಲೂ ಸಂತೋಷವಿದೆ ಎಂಬುದನ್ನು ಕಲಿಸದ ಈ ಶಿಕ್ಷಣ ಮಣ್ಣಿನ ಬದುಕಿನಿಂದ ದೂರವಾದರೇ ಸಾರ್ಥಕತೆ ಎಂದು ಕಲಿಸುತ್ತದೆ. ಅನುಕರಣಾ ಪರಿಣತಿಯುಳ್ಳ ವಿದ್ಯಾರ್ಥಿಗಳಿಗೆ ಏನು ಕಲಿಯಬೇಕು ಅನ್ನುವುದನ್ನು ನಿಗದಿಪಡಿಸುತ್ತಾರೆ ವಿನಾ ಯಾವುದನ್ನು ವಿರೋಧಿಸಬೇಕು ಎಂಬುದನ್ನು ತಿಳಿಸುವುದಿಲ್ಲ. ಬುದ್ಧಿಪೂರ್ವಕವಾಗಿ ಕೆಟ್ಟದ್ದನ್ನು ವಿರೋಧಿಸದಿದ್ದರೆ, ಸಮಾಜ ನೇತ್ಯಾತ್ಮಕವಾಗುತ್ತದೆ. ಜಾಗತಿಕ ಮಾರುಕಟ್ಟೆಯ ವಿರುದ್ಧದ ಸಮರದಲ್ಲಿ ಶಿಕ್ಷಣವೇ ಪರಿಣಾಮಕಾರಿ ಅಸ್ತ್ರ.

ಶೀಲ ರೂಪಿಸುವ ಸಂಸ್ಕೃತಿಯ ಸರಳ ವಿಧಿವಿಧಾನಗಳನ್ನು, ನೀತಿಯುಕ್ತ ನಡವಳಿಕೆಗಳನ್ನು ಅವೈಜ್ಞಾನಿಕ ಕಂದಾಚಾರಗಳೆಂದು ಕೈಬಿಟ್ಟು, ಜಾಗತೀಕರಣದ ಮಾರುಕಟ್ಟೆಯ ಬಳಕೆದಾರರನ್ನಾಗಿಸುವ ಶಿಕ್ಷಣ ಹೇಗೆ ನಮ್ಮತನವನ್ನು, ದೃಢತೆಯನ್ನು ಇಲ್ಲವಾಗಿಸಿ ನಮ್ಮನ್ನು ಯಾಂತ್ರಿಕರನ್ನಾಗಿಸುತ್ತಿದೆ ಎಂದು ಲೇಖಕರು ವಿವರಿಸಿ, ಈ ವ್ಯವಸ್ಥೆಗೆ ಹೊಂದಿಕೊಳ್ಳಲಾರದ ಮಕ್ಕಳನ್ನು ಕಸ ಎಸೆದಂತೆ ನಮ್ಮ ಶಿಕ್ಷಣ ಹೊರಗೆಸೆದು ಬಿಡುತ್ತದೆ ಎಂದು ಹೇಳುತ್ತಾರೆ. ವಿಶ್ವವಿದ್ಯಾಲಯದ ಶಿಕ್ಷಣ ಕಾರ್ಪೊರೇಟ್ ಶೈಲಿಯ ವ್ಯಾಪಾರವಾಗಿ, ಸ್ವತಂತ್ರ, ಸಹಜ ಬದುಕಿನ ಸಾಧ್ಯತೆಗಳು ಚಿಗುರುವುದಕ್ಕೆ ಮುನ್ನ ವಿದ್ಯಾರ್ಥಿಗಳನ್ನು ಬ್ರೇನ್‌ವಾಷ್ ಮಾಡಿ, ಹಣಕ್ಕೆ ವಿಧೇಯರಾದ ವ್ಯಕ್ತಿಗಳನ್ನಾಗಿಸುತ್ತಿದೆ. ನಮ್ಮ ಶಿಕ್ಷಣ ಸುತ್ತಣ ಪರಿಸರಕ್ಕೆ, ಸಮಾಜದ ವಾಸ್ತವತೆಗಳಿಗೆ ಸ್ಪಂದಿಸದ ಮನಸ್ಸುಗಳನ್ನು ತಯಾರಿಸುವ ಪದ್ಧತಿಯಾಗಿದ್ದು, ಮಕ್ಕಳನ್ನು ಯಶಸ್ಸಿನ ಕನಸಿನ ಲೋಕಕ್ಕೆ ತಯಾರು ಮಾಡುತ್ತಿದೆ. ಇದು ಮನುಕುಲದ ವಿನಾಶಕ್ಕೇ ಕಾರಣವಾಗಬಹುದು. ಲಿಂಗಾನುಪಾತದ ಕುಸಿತ, ಸ್ವಾತಂತ್ರ್ಯಾನಂತರ ಇಲ್ಲಿಯವರೆಗೆ ೫ ಕೋಟಿ ಹೆಣ್ಣುಮಕ್ಕಳು ಕಾಣೆಯಾಗಿರುವುದು – ಇವುಗಳ ಹಿನ್ನೆಲೆಯಲ್ಲಿ ಶಿಕ್ಷಣ ಮತ್ತು ಸಾಕ್ಷರತೆ ನಮ್ಮ ಸಾಮಾಜಿಕ ಬದುಕನ್ನು ಹೇಗೆ ಕಟ್ಟಿಕೊಡುತ್ತಿದೆ ಎಂಬುದು ಲೇಖಕರ ಪ್ರಶ್ನೆ.

ಸ್ವಾಮಿ ವಿವೇಕಾನಂದರು ಹೇಳುವ ಜೀವನವನ್ನು ಕಟ್ಟುವ, ಮಾನವ ನಿರ್ಮಾಣ ಮಾಡುವ, ಶೀಲವನ್ನು ಕೊಡುವ ಶಿಕ್ಷಣ ನಮ್ಮ ತರಗತಿಗಳಲ್ಲಿ ಅನುಷ್ಠಾನ ಸಾಧ್ಯವೆ? ನೈತಿಕತೆ, ಆಧ್ಯಾತ್ಮಿಕತೆಗಳು ನಮ್ಮ ದೇಶದ ಮೂಲಬಂಡವಾಳ ಎಂದು ಘೋಷಿಸುವ ನಾವು ವಸ್ತುಲಾಭವನ್ನುಳಿದು ಈ ಬದುಕಿಗೆ ಬೇರಾವ ಅರ್ಥವೂ ಗುರಿಯೂ ಇಲ್ಲ ಎಂಬಂತೆ ನಡೆದುಕೊಳ್ಳುತ್ತಿದ್ದೇವೆ. ವಿದೇಶೀಯರು ಸಮಯಪ್ರಜ್ಞೆ, ಪ್ರಾಮಾಣಿಕತೆ, ಕೊಟ್ಟ ಮಾತಿಗೆ ತಪ್ಪದೆ ಇರುವುದು ಮೊದಲಾದ ಕೆಲವು ಆದರ್ಶಗಳಿಗಾದರೂ ಬದ್ಧತೆಯನ್ನು ತೋರುತ್ತಾರೆ. ಪ್ರಕೃತಿಯನ್ನು ಹಾಗೂ ಇತರರನ್ನು ನಿಯಂತ್ರಣ ಮಾಡುವ, ಕೌಶಲಗಳ ಕಲಿಕೆ ಮುಖ್ಯವಾದ ಪಾಶ್ಚಾತ್ಯ ಚಿಂತನೆಗೂ, ತನ್ನನ್ನೇ ನಿಯಂತ್ರಿಸಿ ಆಂತರಿಕವಾಗಿ ಬದಲಾಗುವ ಗುರಿಯುಳ್ಳ, ಪ್ರಕೃತಿಯೊಂದಿಗೆ ಒಂದಾಗಿ ವಿಶ್ವಕುಟುಂಬಿಯಾಗುವ ಉದ್ದೇಶದ ಭಾರತೀಯ ಚಿಂತನೆಗೂ ವ್ಯತ್ಯಾಸವಿದೆ. ಪರಂಪರಾಗತ ನಂಬಿಕೆಗಳಿಂದ ಬಿಡಿಸಿಕೊಂಡು ಏಕಾಏಕಿ ಆಧುನಿಕರಾಗುವ ಭರದಲ್ಲಿ ನಮ್ಮ ಮಕ್ಕಳು ಮೌಲ್ಯರಹಿತ ಮಾದರಿಗಳಿಂದಲೇ ತಮ್ಮ ಜೀವನದ ಪಾಠವನ್ನು ಅಪ್ರಜ್ಞಾಪೂರ್ವಕವಾಗಿ ಕಲಿಯುತ್ತಿದ್ದಾರೆ. ತನ್ನದೇ ಆದ ಶಿಕ್ಷಣ ಪದ್ಧತಿಯನ್ನು ಕಳೆದುಕೊಂಡ ಭಾರತ ಸಮಸ್ಯೆಗಳಲ್ಲಿ ಟ್ರಾಫಿಕ್ ಜಾಮ್‌ನಲ್ಲಿ ಸಿಕ್ಕಿಕೊಂಡಂತೆ ಒದ್ದಾಡುತ್ತಿದೆ.

ಜಾಗತೀಕರಣ ಪ್ರಣೀತ ಶಿಕ್ಷಣವನ್ನಷ್ಟೆ ಸಾರ್ವತ್ರೀಕರಣಗೊಳಿಸಲು ಹೊರಟಿರುವ ಶಿಕ್ಷಣ ಹಕ್ಕು ಕಾಯ್ದೆ, ಶಿಕ್ಷಣದ ಯಾವ ಹೊಸ ಸಾಧ್ಯತೆಗಳನ್ನೂ ಹುಡುಕದಂತೆ ನಿರ್ಬಂಧಿಸಿ,

ಪರ್ಯಾಯ ಶಾಲೆಗಳಿಗೆ ಅವಕಾಶ ಕೊಡುವುದಿಲ್ಲ. ಮುಚ್ಚುತ್ತಿರುವ ಸರ್ಕಾರಿ ಶಾಲೆಗಳ ನಡುವೆ ವ್ಯಾಪಾರೀ ಖಾಸಗಿ ಶಾಲೆಗಳು ಶಿಕ್ಷಣವನ್ನೊಂದು ಉದ್ಯಮವನ್ನಾಗಿಸಿದ್ದು, ಸಮಾನ ಶಾಲಾವ್ಯವಸ್ಥೆಯನ್ನು ಈ ಕಾಯ್ದೆಯಿಂದಾಗಿ ಸಾಧಿಸಲು ಆಗಿಲ್ಲ. ಸರಕು ಸಂಸ್ಕೃತಿಯಿಂದಾಗಿ ಮನುಷ್ಯ ಸಂಬಂಧಗಳಲ್ಲಿ ಭಾವನಾತ್ಮಕ ಬೆಸುಗೆ ಕಡಿಮೆಯಾಗುತ್ತಿದೆ. ಮಕ್ಕಳು ಭಾವನಾತ್ಮಕ ನಿರಾಕರಣೆಯಿಂದಾಗಿ ಬಳಲುತ್ತಿದ್ದಾರೆ. ಅಲ್ಪತೃಪ್ತಿ, ಪರಸ್ಪರ ಪ್ರೀತಿಗಳು ಬಹುಶಃ ಮನುಷ್ಯನ ವಸ್ತುಸಂಬಂಧಿ ಅವಲಂಬನೆಯನ್ನು ಕಡಿಮೆ ಮಾಡುವುದರಿಂದ ತನ್ನದೇ ಆದ ಕುಟಿಲ ವಿಧಾನಗಳಿಂದ ಮನುಷ್ಯ ಸಂಬಂಧಗಳು ಹದಗೆಡುವಂತೆ ಮಾಡುತ್ತದೆ. ಸಂಯಮದ ಮೌಲ್ಯ ಕಾಣೆಯಾಗುತ್ತಿದೆ. ಶಿಕ್ಷಣದ ವ್ಯಾಪ್ತಿಗೆ ವಿವೇಕ ಬರಲಾರದೇನೋ ಎಂದು ಲೇಖಕರು ಅನುಮಾನಿಸುತ್ತಾರೆ.

ದೇಸೀ ಸಂಸ್ಕೃತಿ, ಸ್ಥಳೀಯ ಜೀವನ ವಿಧಾನಗಳು ಮಗುವಿಗೆ ಗಾಢ ಅನುಭವ ಕೊಟ್ಟಿದ್ದು, ಇವುಗಳನ್ನು ಬಳಸಿಕೊಂಡ ಶಿಕ್ಷಣ ಮಗುವಿನ ವ್ಯಕ್ತಿತ್ವದ ಭಾಗವಾಗುತ್ತದೆ. ನಮ್ಮ ಏಕರೂಪದ ಶಿಕ್ಷಣ ಸ್ಥಳೀಯ ಸಂಸ್ಕೃತಿಯನ್ನು ಪರಿಗಣಿಸುವುದೇ ಇಲ್ಲ. ಇದರಿಂದಾಗಿ ಇಡೀ ಸಮುದಾಯ ತನ್ನ ಅಸ್ಮಿತೆಯನ್ನು ಕಳೆದುಕೊಳ್ಳುತ್ತಿದೆ. ಇದೇ ರೀತಿ ಸಿಲಬಸ್ ನಿಷ್ಠೆ, ಪ್ರಶ್ನೆಗಳಿಗೆ ಸರಿ ಉತ್ತರ ಮನದಟ್ಟು ಮಾಡಿಸುವುದೇ ಶಿಕ್ಷಕರ ಗುರಿಯಾಗಿದ್ದು ಪರಿಕಲ್ಪನೆಗಳನ್ನು ತಿಳಿಸಿ ಹೇಳಿ ಜ್ಞಾನಾರ್ಜನೆಯ ಸಂತೋಷ ಅನುಭವಿಸುವ ಅವಕಾಶ ಅವರ ಕೈತಪ್ಪುತ್ತಿದೆ. ಕ್ಲಸ್ಟರ್ ಸಂಪನ್ಮೂಲ ವ್ಯಕ್ತಿಗಳು ಗುಣಾತ್ಮಕ ಶಿಕ್ಷಣಕ್ಕಿಂತ ಮಾಹಿತಿಯನ್ನು ಉನ್ನತಾಧಿಕಾರಿಗಳಿಗೆ, ಮಂತ್ರಿವರ್ಯರಿಗೆ ಒದಗಿಸುವುದೇ ತಮ್ಮ ಗುರಿ ಎಂದು ಭಾವಿಸಿ ಶೈಕ್ಷಣಿಕ ಸಮಾಲೋಚನೆಗಿಂತ ಅಂಕಿಅಂಶಗಳ ಸಂಗ್ರಹಣೆಗೇ ಹೆಚ್ಚು ಶ್ರಮಪಡುತ್ತಾರೆ. ಈ ಹಿನ್ನೆಲೆಯಲ್ಲಿ ಜಯದೇವ ಅವರು ಗುಣಾತ್ಮಕ ಶಿಕ್ಷಣಕ್ಕೆ ಮಕ್ಕಳ ಕಲಿಕೆಗೆ ಆತಂಕವಿಲ್ಲದ ಪರಿಸರ, ವ್ಯವಧಾನ ಒದಗಿಸುವ ಸಮಷ್ಟಿ ಪ್ರಜ್ಞೆ ಬೆಳೆಸುವ ಗುರುಕುಲ ಮಾದರಿ ಶಿಕ್ಷಣ ಯೋಗ್ಯ ಎನ್ನುತ್ತಾರೆ.

ಧರ್ಮ ಹೇಳುವ ಪಾವಿತ್ರ್ಯ ಮತ್ತು ಸನ್ನಡತೆಗಳೇ ಮನೋನಿಯಂತ್ರಣಕ್ಕೆ ಸಾಧನ, ಕಾನೂನಲ್ಲ. ಲೇಖಕರು ಇಲ್ಲಿ ಹಲವು ಪ್ರಶ್ನೆಗಳನ್ನು ಎತ್ತುತ್ತಾರೆ. ಆರ್ಥಿಕ ಪ್ರಗತಿ ಮತ್ತು ಹಸಿರು ಭೂಮಿ ಒಟ್ಟಿಗೆ ಇರಲು ಸಾಧ್ಯವೆ? ನನ್ನ ನಂತರದ ಪರಿಸರ ಹೇಗಿರಬೇಕು ಎಂಬ ಕಳಕಳಿ ಇವರಿಗೆ ಇದೆಯೆ? ನಾನು ನನ್ನದು ಎನ್ನುವುದು ಹೆಚ್ಚಾಗದೆ, ತೃಪ್ತಿಯಾಗಿ, ಹಸಿದವರಿಗೆ ಸ್ವರಾಜ್ಯ ದೊರಕಿಸಿಕೊಡುವ ಯೋಚನೆ ಇವರಿಗೆ ಬರುತ್ತದೆಯೆ?

ಕೊನೆಯಲ್ಲಿ ಮುನ್ನುಡಿ ಹಾಗೂ ಅನುಬಂಧಗಳ ಬಗ್ಗೆ ಎರಡು ಮಾತು ಬರೆಯಲೇಬೇಕು. ಏಕೆಂದರೆ, ಜಯದೇವ ಅವರನ್ನು ಪುಸ್ತಕ ರಚನೆಗೆ ಪ್ರೇರಿಸಿದವರೇ ಮುನ್ನುಡಿಕಾರರಾದ ಎಚ್.ಎನ್. ಮುರಳೀಧರ ಅವರು. ಅವರು ಇನ್ನಷ್ಟು ಹೊಳಹುಗಳನ್ನು ಮುನ್ನುಡಿಯಲ್ಲಿ ನೀಡಿದ್ದಾರೆ. ಸ್ವಾತಂತ್ರ್ಯದ ಹೊಸ ಕನಸುಗಳನ್ನು ನಮ್ಮಲ್ಲಿ ಕಟ್ಟಿ, ಹೊಸ ಸಾಮಾಜಿಕತೆ, ಹೊಸ ದೃಷ್ಟಿಕೋನಗಳನ್ನಿತ್ತ ಶಿಕ್ಷಣ ಕ್ರಮವೇ ನಂತರ ಪ್ರಜಾಸತ್ತಾತ್ಮಕತೆಯ ವಿರೋಧಿಯೂ, ಬಂಡವಾಳಪರವೂ ಯಾಂತ್ರಿಕವೂ ಆದ ನೆಲೆಗಳನ್ನು ಪ್ರಕಟಿಸಲು ಪ್ರಾರಂಭಿಸಿದುದು ಅವರಿಗೆ ವಿಸ್ಮಯವಾಗಿದೆ. ಶಿಕ್ಷಣ ಅಂತರಂಗದಲ್ಲಿ ಸಂಭವಿಸಿ ವಿಕಸನಗೊಳ್ಳುವ ಬದಲು ಬಹಿರಂಗದಲ್ಲಿ ನಿರ್ಮಾಣವಾಗುವ ವ್ಯವಸ್ಥೆ ಎಂಬ ಗ್ರಹಿಕೆ ಬಂದದ್ದು, ಪೂರ್ವತಯಾರಿಯ ಪುನರಾವರ್ತನೆಯಾದ ತರಗತಿಯ ಸನ್ನಿವೇಶ, ಅಸಹಜತೆಯ ದೂರದಲ್ಲಿಟ್ಟ ಪರೀಕ್ಷಾ ಪ್ರಕ್ರಿಯೆ, ಸ್ಪರ್ಧೆಯಲ್ಲಿ ವಿವೇಕಕ್ಕಿಂತ ಶ್ರೇಣೀಕರಣ ನಿರ್ಮಿಸುವ ಅಂಕಪಟ್ಟಿ-ಪ್ರಮಾಣಪತ್ರಗಳೇ ಅಗತ್ಯವಾಗಿಬಿಡುವುದು ಒಟ್ಟಿನಲ್ಲಿ ದರ್ಶನವಾಗಬೇಕಿದ್ದ ಶಿಕ್ಷಣ ಪ್ರದರ್ಶನವಾಗಿರುವುದು ನೋವಿನ ಅಂಶವಾಗಿದೆ. ಅನುಬಂಧದಲ್ಲಿ ಜಯದೇವ ಅವರು ಸರಕಾರೀ ಶಾಲೆಗಳಲ್ಲಿ ಗುಣಾತ್ಮಕ ಶಿಕ್ಷಣ ತರಲು ಸ್ವಯಂಸೇವಾಸಂಸ್ಥೆಗಳ ಪ್ರಯತ್ನ ಕುರಿತು ವಿವರಿಸಿದ್ದಾರೆ.

ಜಯದೇವ ಅವರು ತಮ್ಮ ಅನೇಕ ವರ್ಷಗಳ ಅನುಭವದಿಂದ ಕಂಡುಕೊಂಡ ಸತ್ಯಗಳನ್ನು ಇಲ್ಲಿ ಪ್ರಾಮಾಣಿಕವಾಗಿ (ಹಾಗೂ ಅಥೆಂಟಿಕ್ ಆಗಿ) ಹೇಳಿರುವುದರಿಂದ ಇಲ್ಲಿನ ವಿಷಯಗಳು ಮನಸ್ಸಿಗೆ ನಾಟುತ್ತವೆ. ಈಶಾವಾಸ್ಯ ಉಪನಿಷತ್ತಿನ ವಿದ್ಯೆಯ ಕುರುಡುಗತ್ತಲೆ (೪೫), ಹಿಂಸೆ ಸಲ್ಲದೆಂಬ ಸೀತೆಯ ಬುದ್ಧಿವಾದ(೫೦), ಧೃತರಾಷ್ಟ್ರ ಕೇಳಿಂದರೂ ಹೆಚ್ಚು ವರ ಕೇಳದ ದ್ರೌಪದಿ(೬೨), ಲಾಸ್‌ಏಂಜಲಿಸ್‌ನಲ್ಲಿ ಶ್ರೀಮಂತನಿಗೆ, ಅಮೆರಿಕದಲ್ಲೂ ಪ್ರೀತಿಗೆ ಬಡತನವಿದೆ ಎಂದು ಕಣ್ತೆರೆಸುವ ಮದರ್ ಥೆರೆಸಾ (೮೨) – ಇತ್ಯಾದಿ. ಇಲ್ಲಿನ ಬರಹಗಳಲ್ಲಿ ಉಪನಿಷತ್ತು, ರಾಮಾಯಣ ಮಹಾಭಾರತ ಇತ್ಯಾದಿ ಸನ್ನಿವೇಶಗಳನ್ನು ಅವರು ಸೂಕ್ತವಾಗಿ ಬಳಸಿ ಕೊಂಡಿದ್ದಾರೆ. ಅವರ ಸಂಸ್ಥೆಯಲ್ಲಿ ಸ್ವಯಂಸೇವಕರಾಗಿ ಬರುವ ವಿದೇಶೀಯರ ನಡವಳಿಕೆ ಕುತೂಹಲ ಹುಟ್ಟಿಸುತ್ತದೆ. ಸ್ಥಳೀಯ ಅಂಗಡಿಯವ ಹಿಟ್ಲರನ ದೇಶದಿಂದ ಬಂದವರಾ ಎಂದು ಕೇಳಿದಾಗ ಬಂದು ಕಣ್ಣೀರಿಟ್ಟ ಸೂಸನ್ (೨೧) ನಮ್ಮ ದೇಶದ ಜನರ ವಿಶ್ಲೇಷಣೆಯನ್ನು ಸರಿಯಾಗಿ ಮಾಡುತ್ತಾಳೆ. ತಮ್ಮ ದೇಶದ ಜನ ಕ್ಯಾಂಟ್‌ನ ತತ್ತ್ವಗಳಿಂದಾಗಿ ತಮ್ಮ ಕಾರ್ಯಕ್ಕೆ ತಾವೆ ಹೊಣೆ ಎಂಬುದನ್ನು ಅರಿತಿದ್ದಾರೆ, ಆದರೆ ಭಾರತೀಯರು ತಾವು ಸ್ವಂತ ವ್ಯಕ್ತಿಗಳಲ್ಲವೇನೋ ಎಂಬಂತೆ ಸರಳ ನಿರ್ಧಾರಗಳನ್ನೂ ತೆಗೆದುಕೊಳ್ಳಲಾರದೆ ಯಾರದೋ ಆದೇಶಕ್ಕಾಗಿ ಕಾಯುತ್ತಿರುವಂತೆ ಕಾಣುತ್ತದೆ ಎಂದು ಹೇಳುತ್ತಾಳೆ. ನೆದರ್‌ಲ್ಯಾಂಡ್‌ನ ಯೋಕ್ ಪೂರ್ವಸಿದ್ಧತೆ ಇಲ್ಲದೆ ತರಗತಿಗೆ ಹೋಗಿ ಪಠ ದಾಡಿದ ಶಿಕ್ಷಕನ ರೀತಿಯನ್ನು ಅಭಿನಯಿಸಿ ನಮ್ಮ ಪಠ್ಯಪುಸ್ತಕಗಳು 'too much of spoon feeding' ಎಂದು ಹೇಳಿ ಏಕರೂಪದ ಪಠ್ಯಪುಸ್ತಕ ಗಳು ತರಗತಿಯ ಸಾಧ್ಯತೆಗಳನ್ನು ಮೊಟಕುಗೊಳಿಸುತ್ತವೆ ಎನ್ನುತ್ತಾಳೆ (೯೮). ಭಾಷೆ ಕೆಲವೆಡೆ ಕ್ಲಿಷ್ಟವಾಗಿದ್ದರೂ, ಇಷ್ಟು ಸಣ್ಣ ಪುಸ್ತಕದಲ್ಲಿ ಎಷ್ಟೊಂದು ವಿಚಾರಗಳನ್ನು ಹೇಳಿದ್ದಾರೆ!

ಒಟ್ಟಿನಲ್ಲಿ ಕುಸಿಯುತ್ತಿರುವ ಗುಣಾತ್ಮಕ ಶಿಕ್ಷಣದ ಸನ್ನಿವೇಶದಲ್ಲಿ ಜಯದೇವ ಅವರ ಪ್ರಯತ್ನಗಳು ಹಾಗೂ ಈ ಪುಸ್ತಕ ಭರವಸೆಯನ್ನು ಮೂಡಿಸುತ್ತಿದೆ. ಇದೊಂದು ಸಂಗ್ರಹಯೋಗ್ಯ ಪುಸ್ತಕ. ✳

**ಯಾರೂ ಮತ್ತೊಬ್ಬರಿಗೆ ಕಲಿಸಲಾರರು. ಗುರು ತಾನು ಕಲಿಸುತ್ತಿರುವೆ ಎಂದು ಭಾವಿಸುವುದರಿಂದ ಎಲ್ಲವನ್ನೂ ಹಾಳು ಮಾಡುವನು. ಪ್ರತಿಯೊಬ್ಬನಲ್ಲಿಯೂ, ಒಂದು ಮಗುವಿನಲ್ಲೂ ಕೂಡ ಆಗಲೆ ಜ್ಞಾನವಿದೆ ಎನ್ನುವುದು ವೇದಾಂತ. ಅದು ಕೇವಲ ಜಾಗೃತವಾಗಬೇಕಾಗಿದೆ ಅಷ್ಟೆ. ಇಷ್ಟುಮಾತ್ರ ಗುರುವಿನ ಕೆಲಸ. ಅವನು ವಿದ್ಯಾರ್ಥಿಗಳಿಗೂ ಇಷ್ಟನ್ನೇ ಮಾಡಬೇಕು. ಮಕ್ಕಳೇ ತಮ್ಮ ಬುದ್ಧಿಯನ್ನು ಉಪಯೋಗಿಸಿ ಅದನ್ನು ಕಾರ್ಯಗತ ಮಾಡುವುದನ್ನು ಕಲಿಯಲಿ. ಕೊನೆಗೆ ಎಲ್ಲವೂ ಸುಲಭವಾಗುವುದು.**

**–ಸ್ವಾಮಿ ವಿವೇಕಾನಂದ**

# ಆಧ್ಯಾತ್ಮಿಕ ಸಂಭಾಷಣೆ

## ಸ್ವಾಮಿ ಭೂತೇಶಾನಂದಜಿಯವರೊಂದಿಗೆ

ಕನ್ನಡ ಅವತರಣಿಕೆ : ಸ್ವಾಮಿ ಮಂಗಳಾತ್ಮಾನಂದ



ಒಂದಿಷ್ಟು ಪ್ರಶ್ನೋತ್ತರಗಳು ನಡೆದ ಮೇಲೆ ಮಹಾರಾಜರು ವಿದ್ಯಾಪತಿಯ* ಎರಡು ವಾಕ್ಯಗಳನ್ನು ಗೊಣಗುಟ್ಟಿದರು. ವಿದ್ಯಾಪತಿ ಹೇಳುತ್ತಾನೆ: 'ಭಗವಂತನಿಲ್ಲದೆ ನಿನ್ನ ದಿನಗಳನ್ನು ಹೇಗೆ ಕಳೆಯುತ್ತೀಯಾ?' ನಿರಂಜನಾನಂದರ ಭಗವತ್‌ಪ್ರಾಪ್ತಿಗಾಗಿ ಶ್ರೀರಾಮಕೃಷ್ಣರು ಚಡಪಡಿಸುತ್ತಿದ್ದರು. 'ಎಲೆ ನಿರಂಜನ, ದಿನಗಳು ಉರುಳುತ್ತಿವೆ. ನೀನು ಭಗವತ್ಸಾಕ್ಷಾತ್ಕಾರ ಯಾವಾಗ ಮಾಡುವೆ?' ನಿರಂಜನನಿಗೆ ಭಗವತ್‌ಪ್ರಾಪ್ತಿಯಾಗಿಲ್ಲವೆಂದು ಠಾಕೂರ್ ಎಷ್ಟು ವ್ಯಥೆಪಟ್ಟಿದ್ದರು! ನಮಗೆ ಹೀಗಾಗುತ್ತಿದೆಯೆ? ನಮ್ಮ ಆಯುಷ್ಯ ಮುಗಿಯುತ್ತ ಬಂದಿದೆ. ಭಗವತ್ಪ್ರಾಪ್ತಿಗಾಗಿ ನಮ್ಮಲ್ಲಿ ಈ ವ್ಯಾಕುಲತೆ ಇದೆಯೆ? ಭಗವಂತನಿಲ್ಲದೆ ನಮ್ಮ ಜೀವನ ಬಹಳ ಆನಂದವಾಗಿ ನಡೆಯುತ್ತಿದೆ!

**ಪ್ರಶ್ನೆ:** ಮಹಾರಾಜ್, ಯಾಕೆ ವ್ಯಾಕುಲತೆ ಬರುತ್ತಿಲ್ಲ?

**ಮಹಾರಾಜ್:** ಯಾಕೆಂದು ಹೇಳಲಾಗದು. ಆದರೆ ಬರುತ್ತಿಲ್ಲವೆಂದು ಅನುಭವವಾಗುತ್ತಿದೆ. ಇಷ್ಟೆಲ್ಲ ತಿಳಿದೂ, ದೇವರಿಗಾಗಿ ನಾವು ವ್ಯಾಕುಲರಾಗುತ್ತಿಲ್ಲ. ಇದೇ ಮಾಯೆ. ನಿಜವಾಗಿಯೂ ಭಗವಂತನಿಲ್ಲದೆ ನಮ್ಮ ಜೀವನ ಅಸಹನೀಯವೆಂದು ನಮಗನ್ನಿಸುವುದಿಲ್ಲ. ಅವನಿಲ್ಲದೆ ನಮ್ಮ ಜೀವನ ನಡೆಯದು ಎಂಬ ಸತ್ಯ ನಮ್ಮ ಅರಿವಿಗೆ ಬಂದಿದೆಯೆ? ಇಲ್ಲ. ಕಾರಣ – ಆತ ಸಿಗದಿದ್ದರೂ ನಮ್ಮ ಜೀವನ ನಡೆಯುತ್ತಿದೆ.

ಊಟ, ನಿದ್ದೆ ಇವುಗಳಲ್ಲಿ ನಮ್ಮ ಜೀವನ ಆನಂದವಾಗಿದೆ. ಸ್ವಾಮಿ ಬ್ರಹ್ಮಾನಂದರು ಹೇಳುತ್ತಿದ್ದರು, ಸಾಧನೆಯನ್ನೆಲ್ಲ ಮೂವತ್ತರೊಳಗೆ ಮುಗಿಸಬೇಕು, ಅನಂತರ ಅದು ಸಾಧ್ಯವಿಲ್ಲ ಎಂದು.ಇದು ನೂರಕ್ಕೆ ನೂರು ಸತ್ಯ – ಅದಾದ ಮೇಲೆ ಯೌವನದ ತೇಜಸ್ಸು, ಶಕ್ತಿ ಎಲ್ಲವೂ ಹೊರಟು ಹೋಗುತ್ತವೆ.

**ಪ್ರಶ್ನೆ:** ವ್ಯಾಕುಲತೆ ಏಕೆ ಬರುತ್ತಿಲ್ಲ? ಸ್ವಲ್ಪ ವಿವರಿಸಿ.

**ಮಹಾರಾಜ್:** ಯೋಚನೆ ಮಾಡಿ ನೋಡು. ಗೃಹತ್ಯಾಗ ಮಾಡಿದಂದು ಇದ್ದ ವೈರಾಗ್ಯ, ತೇಜಸ್ಸು, ದೃಢತೆ ಈಗ ಇದೆಯೆ? ದಿನಗಳು ಉರುಳುತ್ತಿವೆ. ನನಗೆ ಜ್ಞಾಪಕಕ್ಕೆ ಬರುತ್ತಿದೆ, ಮನೆಯಿಂದ ಪಲಾಯನ ಮಾಡಿದ ದಿನ ಏನು ವ್ಯಾಕುಲತೆ, ಏನು ಕಾತರತೆ! ಮೈಮೇಲೊಂದು ಬಟ್ಟೆ ಕಟ್ಟಿಕೊಳ್ಳಬೇಕೆಂದೂ ಅನಿಸುತ್ತಿರಲಿಲ್ಲ. ಯಾರೂ ನಿದ್ರಿಸದೆ ನನ್ನನ್ನೇ ಗಮನಿಸುತ್ತಿದ್ದಾರೆಂದು ಅನ್ನಿಸುತ್ತಿತ್ತು. ಅದೊಂದು ಮಾನಸಿಕ ಅವಸ್ಥೆ. ಯೋಚಿಸು, ಆ ವೈರಾಗ್ಯ ಏಕೆ ಕಡಿಮೆಯಾಯಿತು?

**ಪ್ರಶ್ನೆ:** ಹೌದು, ಕಡಿಮೆಯಾಗಿದೆ, ನೀವು ಹೇಳುವುದು ಸರಿ. ಅಂದರೆ ನಮ್ಮ ವೈರಾಗ್ಯ ಮರ್ಕಟ ವೈರಾಗ್ಯವಾಗಿತ್ತೆ?

**ಮಹಾರಾಜ್:** ಹಾಗೇಕೆ ಹೇಳುತ್ತಿಯಾ? ಗೃಹತ್ಯಾಗ ಮಾಡುವಾಗ ಎಲ್ಲರೂ ಭಗವಂತನಿಗಾಗಿ ಎಂದೇ ಮನೆ ಬಿಟ್ಟರು. ಗೃಹತ್ಯಾಗ ಮಾಡಿದಾಗ ಕಪಟತನವಿತ್ತೆ? ಇರಲಿಲ್ಲ.

**ಪ್ರಶ್ನೆ:** ಮಹಾರಾಜ್, ಹೇಗೆ ಅಂಥ ವೈರಾಗ್ಯವನ್ನು ಹಿಡಿದಿಟ್ಟುಕೊಳ್ಳಲಿ?

**ಮಹಾರಾಜ್:** ಸಾಧನೆ, ಭಜನೆ ಇವುಗಳ ಮೂಲಕ ವೈರಾಗ್ಯವನ್ನು ವೃದ್ಧಿಸಿಕೊಳ್ಳಬೇಕು.

**ಪ್ರಶ್ನೆ:** ಈಶ್ವರಾನುಗ್ರಹವಿಲ್ಲದೆ ಅದೆಲ್ಲ ಸಾಧ್ಯವೆ?

**ಮಹಾರಾಜ್:** ಈಶ್ವರನ ಕೃಪೆ – ಅದು ಅವನಿಗೆ ಬಿಟ್ಟ ವಿಚಾರ. (ದೃಢವಾದ ಸ್ವರದಲ್ಲಿ) ನಾವೇನು ಮಾಡುತ್ತಿದ್ದೇವೆ? ನಾವು ಉಳಿದದ್ದನ್ನೆಲ್ಲ ಮಾಡಬಲ್ಲೆವು. ನಮಗೇನು ಬೇಕೋ ಅದನ್ನು ನಮ್ಮಿಷ್ಟದಂತೆ ಮಾಡುತ್ತೇವೆ. ಭಗವಂತನ ವಿಚಾರ ಬಂದಾಗ, ಆತ ಕೃಪೆ ಮಾಡದಿದ್ದರೆ ಏನೂ ಆಗದು ಎನ್ನುತ್ತೇವೆ.

**ಪ್ರಶ್ನೆ:** 'ಪ್ರತಿಯೊಂದು ಆತ್ಮನಲ್ಲಿಯೂ ದಿವ್ಯತೆ ಹುದುಗಿದೆ. ಈ ಸುಪ್ತವಾದ ದಿವ್ಯತೆಯನ್ನು ಬಾಹ್ಯ ಮತ್ತು ಆಂತರಿಕ ಪ್ರಕೃತಿಯ ನಿಗ್ರಹದಿಂದ ವ್ಯಕ್ತಪಡಿಸುವುದೇ ಜೀವನದ ಗುರಿ. ಇದನ್ನು ಕರ್ಮಯೋಗದಿಂದಾಗಲಿ, ಭಕ್ತಿಯೋಗದಿಂದಾಗಲಿ, ರಾಜಯೋಗದಿಂದಾಗಲಿ, ಜ್ಞಾನಯೋಗದಿಂದಾಗಲಿ, ಯಾವುದಾದರೂ ಒಂದು ಮಾರ್ಗದಿಂದ ಅಥವಾ ಎಲ್ಲಾ ಮಾರ್ಗಗಳ ಸಂಯೋಗದಿಂದಾಗಲಿ ಸಾಧಿಸಿ ಮುಕ್ತರಾಗಿ' ಎಂದು ಸ್ವಾಮೀಜಿ ಹೇಳುತ್ತಾರೆ. ಪುನಃ ಮಠದ ನಿಯಮಾವಳಿಗಳಲ್ಲಿ , 'ಯಾರ ಜೀವನದಲ್ಲಿ ನಾಲ್ಕು ಯೋಗಗಳ ಸಮನ್ವಯವಾಗಿಲ್ಲವೋ, ಆತನ ಜೀವನ ಶ್ರೀರಾಮಕೃಷ್ಣರ ಮೂಸೆಯಲ್ಲಿ ದೃಢವಾಗಿಲ್ಲ' ಎನ್ನುತ್ತಾರೆ. ಹಾಗಾದರೆ ಮೊದಲನೆಯದು ನಮಗೆ ಹೇಳಿದ್ದಲ್ಲವೆ?

**ಮಹಾರಾಜ್:** ಎಲ್ಲವೂ ಎಲ್ಲರಿಗಾಗಿಯೇ ಇದೆ. ಯಾರಿಂದ ಎಷ್ಟು ಸಾಧ್ಯವೋ ಅಷ್ಟು ಮಾಡಬೇಕು. ಒಬ್ಬ ವ್ಯಕ್ತಿಗೆ ಒಂದು, ಎರಡು, ಅಥವಾ ಅದಕ್ಕಿಂತ ಹೆಚ್ಚು ಯೋಗಗಳನ್ನು ಪ್ರಯೋಗಿಸಲು ಸ್ವಾಮೀಜಿ ಅವಕಾಶ ಕೊಡುತ್ತಾರೆ, ಉತ್ಸಾಹ ನೀಡುತ್ತಾರೆ. ಇದೇ ಅವರ ಉದಾರತೆ. ಆದರೆ ಆದರ್ಶದ ವಿಚಾರ ಬಂದಾಗ, ನಾಲ್ಕು ಯೋಗಗಳ ಸಮನ್ವಯದ ಪರೀಕ್ಷೆಯ ಬಗೆಗೂ ಹೇಳುತ್ತಾರೆ. ಮುಖ್ಯವಾದ ವಿಚಾರವೆಂದರೆ, ಭಗವತ್ಪ್ರಾಪ್ತಿ ಮಾಡಿಕೊಳ್ಳುವುದು.

ಒಂದೇ ಯೋಗವನ್ನು ಮಾಡಲಿ, ಎರಡನ್ನು ಮಾಡಲಿ, ಅಥವಾ ಎಲ್ಲವನ್ನೂ ಅನುಷ್ಠಾನ ಮಾಡಲಿ – ಅದು ಮುಖ್ಯ ವಿಚಾರವಲ್ಲ. ನಮ್ಮ ಮೂಲ ಉದ್ದೇಶ ಗುರಿ ತಲುಪುವುದು. ಎಷ್ಟು ಮಾರ್ಗಗಳಿವೆಯೋ, ಅವುಗಳನ್ನೆಲ್ಲ ಅನುಸರಿಸಿದರೂ ತಪ್ಪೇನಿಲ್ಲ. ಚಿನ್ನ ಕರಗಿಸುವುದನ್ನು ನೋಡಿಲ್ಲವೆ? ಅಕ್ಕಸಾಲಿಗ ಒಂದು ಕೈಯಿಂದ ಬೀಸಣಿಗೆ ಬೀಸುತ್ತಾನೆ, ಬಾಯಿಯಿಂದ ಕೊಳವೆ ಮೂಲಕ ಗಾಳಿ ಊದುತ್ತಾನೆ, ಕುಲುಮೆಯ ಬಿಸಿಗಾಳಿಯ ಹೊಡೆತವನ್ನು ಸಹಿಸಿಕೊಳ್ಳುತ್ತಾನೆ, ಇವೆಲ್ಲ

* ಬಿಹಾರದ ಒಬ್ಬ ಪ್ರಸಿದ್ಧ ಕವಿ, ಮೈಥಿಲಿ ಭಾಷೆಯಲ್ಲಿ ತನ್ನ ಕಾವ್ಯಗಳನ್ನು ಬರೆದ. ಇವನ ಕಾಲ ಕ್ರಿ.ಶ. ೧೪–೧೫ ನೇ ಶತಮಾನ – ಅನುವಾದಕ

ಏಕೆ? ಚಿನ್ನ ಕರಗಿಸಲು ಆತ ವ್ಯಾಕುಲನಾಗಿದ್ದಾನೆ. ಅವನ ಬಳಿ ಎಷ್ಟು ದಾರಿಗಳಿವೆಯೋ ಅವನ್ನೆಲ್ಲ ಬಳಸಬೇಕು. ಭಗವಂತನ ಸಾಕ್ಷಾತ್ಕಾರಕ್ಕಾಗಿ ನಮಗೆ ಇಂತಹ ಕಾತರತೆ ಬಂದರೆ ಆಗ ಆಯ್ಕೆಯ ಪ್ರಶ್ನೆಯೇ ಬರುವುದಿಲ್ಲ. ಈಗ ನಾವು ಎಲ್ಲ ಮಾರ್ಗಗಳನ್ನೂ ಬಳಸುತ್ತಿದ್ದೇವೆ. ಜಪ, ಧ್ಯಾನ ಮಾಡುವಾಗ ಏನು ಮಾಡುವೆ? ಅನವಶ್ಯಕ ವಿಚಾರಗಳನ್ನು ದೂರಮಾಡಲು ಪ್ರಯತ್ನ ಮಾಡುವೆ. ಮನಸ್ಸನ್ನು ಸಂಯಮಕ್ಕೆ ತಂದು, ಇಷ್ಟದೇವತೆಯ ಪಾದಪದ್ಮದಲ್ಲಿಡಲು ಪ್ರಯತ್ನ ಮಾಡುವೆ. ಮನಸ್ಸಿನಲ್ಲಿ ಇಷ್ಟಮಂತ್ರದ ಜಪ ಮಾಡುವೆ, ಇಷ್ಟಮೂರ್ತಿಯ ಧ್ಯಾನ ಮಾಡುವೆ. ಹೀಗೆ ಎಲ್ಲವನ್ನೂ ಪ್ರಯತ್ನಿಸುವೆ. ಅಂದರೆ? ಒಟ್ಟಿಗೇ ನಾಲ್ಕು ಯೋಗವನ್ನೂ ಮಾಡುವೆ.

**ಪ್ರಶ್ನೆ:** ನಿರ್ಜನವಾಸದ ಮಹತ್ವದ ಬಗ್ಗೆ ಠಾಕೂರ್ ಹೇಳುತ್ತಾರೆ. ನಮ್ಮ ಇಂದಿನ ಜೀವನದಲ್ಲಿ ನಿರ್ಜನವಾಸ ಹೇಗೆ ಸಾಧ್ಯ?

**ಮಹಾರಾಜ್:** ಹೌದು, ನಿರ್ಜನವಾಸದ ಬಗ್ಗೆ ಠಾಕೂರ್ ಹೇಳುತ್ತಾರೆ. ಯಾವಾಗಲೂ ನಿರ್ಜನವಾಸವಲ್ಲ , ಎಲ್ಲೋ ನಡುನಡುವೆ. ನಿರ್ಜನ ವಾಸಕ್ಕಾಗಿ, ತಪಸ್ಸಿಗಾಗಿ ಮೊದಲೇ ಮನಸ್ಸನ್ನು ಸಿದ್ಧಗೊಳಿಸಬೇಕು. ಹಾಗಿದ್ದರೆ ನಿರ್ಜನವಾಸ, ತಪಸ್ಸು ಇವುಗಳಿಂದ ಲಾಭವಾಗುತ್ತದೆ. ನನಗೆ ಒಂದು ಸಲ ತಪಸ್ಸಿಗಾಗಿ ರಜೆ ಸಿಕ್ಕಿತು. ಮಹಾಪುರುಷ ಮಹಾರಾಜರಿಗೆ ಹೇಳಿದಾಗ ಅವರಿಗೆ ತುಂಬಾ ಸಂತೋಷವಾಯಿತು. ಹೋಗುವ ಮೊದಲು, 'ಇದ್ದಷ್ಟು ದಿನ ತುಂಬಾ ಕಳಕಳಿಯಿಂದ ಜಪ ಧ್ಯಾನ ಮಾಡು, ಹಾಗಿದ್ದರೆ ತಪಸ್ಸಿಗೆ ಹೋದಾಗಿನ ಸಮಯವನ್ನು ಸರಿಯಾಗಿ ವಿನಿಯೋಗಿಸಲು ಸಾಧ್ಯ' ಎಂದರು. ನಾನು ಹಾಗೆಯೇ ಮಾಡಿದ್ದೆ. ಠಾಕೂರರ ಶಿಷ್ಯರು ನಮಗೆ ಬಹಳ ಪ್ರೋತ್ಸಾಹ ಕೊಡುತ್ತಿದ್ದರು. ಅದನ್ನೀಗ ಊಹೆ ಮಾಡಲೂ ಸಾಧ್ಯವಿಲ್ಲ. ಅವರು ಸಾಧನೆ–ಭಜನೆ ಮಾಡಲು ಎಷ್ಟೊಂದು ಪ್ರೋತ್ಸಾಹ ಕೊಡುತ್ತಿದ್ದರು!

**ಪ್ರಶ್ನೆ:** ಗೃಹತ್ಯಾಗ ಮಾಡಿದಾಗ ವೈರಾಗ್ಯದಿಂದ ತುಂಬಿ ತುಳುಕುತ್ತಿದ್ದೆ. ಬರುಬರುತ್ತ ಆ ವೈರಾಗ್ಯ ಕಡಿಮೆಯಾಗುತ್ತಿದೆ. ಹೀಗೇಕೆ ಆಗುತ್ತದೆ? ಇದಕ್ಕೆ ಪರಿಹಾರವೇನು?

**ಮಹಾರಾಜ್:** ಗೃಹತ್ಯಾಗ ಮಾಡಿ ಬರುವಾಗ ತೀವ್ರ ವೈರಾಗ್ಯವಿರುತ್ತದೆ. ಬರುಬರುತ್ತ ಅದು ಕಡಿಮೆಯಾಗುತ್ತದೆ, ಹಿಂದಿನಂತೆ ಇರುವುದಿಲ್ಲ, ಅದು ಸತ್ಯ. ಪ್ರತಿಯೊಬ್ಬ ಸಾಧಕನ ಅಭಿಪ್ರಾಯವೂ ಇದೇ. ಇದಕ್ಕೆ ಕಾರಣವೇನು? ಕಾರಣವಿಷ್ಟೆ – ಮನಸ್ಸಿನ ಸ್ವಭಾವ. ಮನಸ್ಸಿನ ಚಲನೆ ಹಾಗೆ. ಯಾವಾಗಲೋ ಉಚ್ಚಸ್ಥಿತಿಗೇರುತ್ತದೆ, ಅನಂತರ ಕೆಳಗಿನ ಸ್ಥಿತಿಗೆ ಇಳಿಯುತ್ತದೆ. ಮೇಲೇರುವುದು, ಕೆಳಗಿಳಿಯುವುದು ಮನಸ್ಸಿನ ಸ್ವಭಾವ. ಗೃಹತ್ಯಾಗ ಮಾಡುವಾಗ ನವಾನುರಾಗ ಇರುತ್ತದೆ. ಆದರೆ ಬರಬರುತ್ತ ಈ ಆಕರ್ಷಣೆ ಕಡಿಮೆಯಾಗುತ್ತದೆ. ಒಂದೇ ಸಲ ಕಡಿಮೆ ಆಗುವುದಿಲ್ಲ; ಕೆಲವು ಸಲ ಪುನಃ ಅದೇ ವೈರಾಗ್ಯ ಹೆಚ್ಚಾಗುತ್ತ ಹೋಗುವುದುಂಟು. ಇದು ಮನಸ್ಸಿನ ಸ್ವಭಾವ. ಮನಸ್ಸಿನ ವ್ಯವಹಾರವನ್ನು ಪರೀಕ್ಷಿಸಿ ತಿಳಿದುಕೊಳ್ಳಬೇಕು. ಇದರಿಂದ ಹತಾಶರಾಗಕೂಡದು. ಮನಸ್ಸು ಕೆಳಗೆ ಮಾತ್ರ ಇಳಿಯುವುದೆಂದು ತಿಳಿದುಕೊಳ್ಳಬಾರದು, ಅದನ್ನು ಪುನಃ ಮೇಲಕ್ಕೇರಿಸಲು ಪ್ರಯತ್ನಿಸಬೇಕು. ಇದರ ಬಗ್ಗೆ ನಾವು ಸದಾ ಜಾಗ್ರತ ಸ್ಥಿತಿಯಲ್ಲಿರಬೇಕು. ಠಾಕೂರ್ ಉದಾಹರಣೆ ಕೊಡುತ್ತಾರೆ – ಕೊಲ್ಮಿ* ಸೊಪ್ಪಿನ ಬಳ್ಳಿಯ ಹಾಗೆ, ಇಳಿಜಾರು ರಸ್ತೆಯಲ್ಲಿ ಕೆಳಗಿಳಿದ ಹಾಗೆ ಎಂದು.

ನಾವು ಏನು ಪ್ರಯತ್ನ ಪಡುತ್ತೇವೆಯೋ, ಅದು ಅತಿ ಸಾಮಾನ್ಯ ಪ್ರಯತ್ನವೇ ಆಗಿರಬಹುದು, ಆದರೆ ಅದು ವ್ಯರ್ಥವಾಗುವುದಿಲ್ಲ, ಅದು ನಮ್ಮ ಖಾತೆಯಲ್ಲಿ ಜಮಾ ಆಗುತ್ತದೆ. ಆದರ್ಶದ ಕಡೆ, ಉದ್ದೇಶದ ಕಡೆ ಒಂದು ಸಣ್ಣ ಹೆಜ್ಜೆ ಹಾಕಲು ಪ್ರಯತ್ನ ಮಾಡಿದರೂ, ಅಷ್ಟು ದೂರ ಕ್ರಮಿಸಿದ ಹಾಗಾಯಿತು. ಅಷ್ಟಂತೂ ಜಮಾ ಆಗುತ್ತದೆ. ಕೆಲವು ಸಲ ಸಾಧನೆಯ ಹಾದಿಯಲ್ಲಿ ಮನಸ್ಸಿಗೆ ತುಂಬಾ ಸೋಮಾರಿತನ ಬರುವುದುಂಟು. ಸಾಧನೆ ಭಜನೆಯಲ್ಲಿ ನಾನು ಒಂದು ಕಿಂಚಿತ್ತೂ ಮುಂದುವರೆಯಲಿಲ್ಲವೆಂದು ಆಗ ಅನಿಸುತ್ತದೆ. ಮನಸ್ಸಿಗೆ ಎಲ್ಲ ಶುಷ್ಕ ಎಂದೆನಿಸುತ್ತದೆ. ಆದರೆ ಯಾವಾಗ ಹೀಗೆ ಮನಸ್ಸಿಗೆ ಅನ್ನಿಸುತ್ತದೋ, ಆಗ ನಾವು ಖಂಡಿತ ಸರಿದಾರಿಯಲ್ಲಿ ಮುಂದುವರೆಯುತ್ತಿದ್ದೇವೆ ಎಂದೇ ಭಾವಿಸಬೇಕು. ನೀನು ಸರಿ ದಾರಿಯಲ್ಲಿ ನಡೆಯುತ್ತಿದ್ದೀಯಾ ಎಂಬುದಕ್ಕೆ ಕೆಲವು ಸೂಚನೆಗಳು ಸಿಗುವ ತನಕ ಮರುಗುವುದೆ? ಇಲ್ಲ. ಹತಾಶರಾಗಿ ಬಿಟ್ಟುಬಿಡುವುದೆ? ಬಿಡಬಾರದು. ನಿಧಾನವಾಗಿ ಈ ಮಾನಸಿಕ ಅವಸ್ಥೆ ಹೊರಟು ಹೋಗುತ್ತದೆ. ಸಾಧನೆಯಲ್ಲಿ ರುಚಿ ಸಿಗುತ್ತದೆ.

ನಮ್ಮ ಜೀವನದಲ್ಲಿ ನಮಗೆ ಭಗವದಭಿರುಚಿಯ ಅಭಾವವಿದೆಯೆಂದು ಅನಿಸುತ್ತಿದೆಯೆ? ಆ ಬೋಧೆ ಇಲ್ಲವೆಂದು ನಮಗೆ ಚಿಂತೆಯಾಗುತ್ತಿಲ್ಲ. ಭಗವಂತನಿಲ್ಲದೆ ನನ್ನ ಜೀವನ ಅಸಹನೀಯ ಎಂಬ ಬೋಧೆ ಬಂದರೆ, ಆಗಲೇ ಅರುಣೋದಯವಾಯಿತು – ಹೀಗೆಂದು ಶ್ರೀರಾಮಕೃಷ್ಣರು ಹೇಳಿದ್ದಾರೆ. ಅನಂತರ ಆತನಿಗೆ ಸಾಕ್ಷಾತ್ಕಾರವಾಗಲು ಹೆಚ್ಚು ಹೊತ್ತು ಬೇಕಾಗುವುದಿಲ್ಲ. ಹೀಗೆ ಮನಸ್ಸಿಗೆ ವ್ಯಾಕುಲತೆ ಬರುವ ತನಕ ಏನೇ ಮಾಡಿದರೂ ಪ್ರಯೋಜನವಿಲ್ಲ. ಹಾಗೆಂದು ಪ್ರಯತ್ನ ಬಿಡುವುದಲ್ಲ. ಎಲ್ಲಿ ತನಕ ಈ ವ್ಯಾಕುಲತೆ ಬರುವುದಿಲ್ಲವೋ ಅಲ್ಲಿ ತನಕ ಪ್ರಯತ್ನ ಮಾಡುತ್ತಲೇ ಇರಬೇಕು. ನಮ್ಮ ಕಿಂಚಿತ್ ಪ್ರಯತ್ನವೂ ವ್ಯರ್ಥವಾಗುವುದಿಲ್ಲ. ಮುಂದಿನ ಜೀವನದಲ್ಲಿ ಹೆಚ್ಚಿನ ಕಷ್ಟಗಳು ಬಂದರೆ, ಆಗ ನಮ್ಮ ಅಲ್ಪ ಪ್ರಯತ್ನದ ಸತ್ಫಲವೇ ನಮ್ಮನ್ನು ರಕ್ಷಿಸುತ್ತದೆ. ಪ್ರಯತ್ನ ಎಷ್ಟೇ ಚಿಕ್ಕದಾಗಿರಲಿ, ಅದನ್ನು ಮರೆಯಬಾರದು. ಒಂದು ಸ್ವಲ್ಪ ನಾಮಸ್ಮರಣೆ ಮಾಡುತ್ತಿದ್ದರೂ ಅದು ಆಪತ್ಕಾಲದಲ್ಲಿ ನಮ್ಮ ಮನಸ್ಸಿಗೆ ಬಲ ಕೊಡುತ್ತದೆ. ಪ್ರಾರಂಭ ಕಾಲದಲ್ಲಿದ್ದ ಉತ್ಸಾಹ, ಪ್ರಯತ್ನ, ವೈರಾಗ್ಯಗಳು ಭವಿಷ್ಯತ್ತಿನಲ್ಲಿ ಸ್ಮರಣೆಗೆ ಬರಬೇಕು. ಆಗ,'ಆಹಾ ಪ್ರಾರಂಭದಲ್ಲಿ ಎಂತಹ ವೈರಾಗ್ಯವಿತ್ತು, ಎಂತಹ ಮಾನಸಿಕ ಸ್ಥಿತಿ ಇತ್ತು, ಎಂತಹ ಸೆಳೆತವಿತ್ತು' ಎಂದು ಅನಿಸುತ್ತದೆ.

ಯಾರ ಪತನ, ಹೇಗೆ ಆಗುತ್ತದೆಂದು ಯಾರಿಂದಲೂ ಹೇಳಲಾಗದು. ಏಕೆಂದರೆ ಈ ಪ್ರಕೃತಿಯ ನಿಯಮವೇ ಹಾಗೆ. ಪತನ ಯಾಕೆ, ಹೇಗೆ ಎಂದು ದೃಢವಾಗಿ ಯಾರಿಂದಲೂ ಹೇಳಲು ಸಾಧ್ಯವಿಲ್ಲ. – ಭಗವಂತನಿಗಾಗಿ ಯಾರು ಕಣ್ಣೀರು ಸುರಿಸುತ್ತಾರೋ, ಅದು ಜಮಾ ಆಗುವುದು, ವ್ಯರ್ಥವಾಗುವುದಿಲ್ಲ. ಅದು ಮುಂದೆ ಯಾವಾಗಲೋ ಫಲ ಕೊಡುತ್ತದೆ ಎಂದು ಠಾಕೂರ್ ಹೇಳುತ್ತಿದ್ದರು. ✴

* ಇದೊಂದು ಸೊಪ್ಪು, ತರಕಾರಿ ಮಾಡುವಂತದ್ದು. ನೀರಿನಲ್ಲಿ, ನೆಲದಲ್ಲಿ ಎರಡೂ ಕಡೆ ಬೆಳೆಯುತ್ತದೆ. ಉದ್ದಕ್ಕೂ ಗೆಣಸಿನ ಬಳ್ಳಿಯ ಹಾಗೆ ಬೆಳೆಯುತ್ತದೆ. ಒಂದು ಬಳ್ಳಿ ಹಿಡಿದೆಳೆದರೆ ಒಂದು ರಾಶಿ ಕೈಗೆ ಬರುತ್ತದೆ.

# ಯೋಗವಾಸಿಷ್ಠದ ಕಥೆಗಳು



ಸ್ವಾಮಿ ವೀರೇಶಾನಂದ

ಕಥಾಗುಚ್ಛ - ೭

## ಶುಕ್ರಾಚಾರ್ಯನ ಕಥೆ

**ವ**ಸಿಷ್ಠರು ರಾಮನಿಗೆ ತಮ್ಮ ಉಪದೇಶವನ್ನು ಮುಂದುವರೆಸುತ್ತಿದ್ದಾರೆ: ''ರಾಮ, ಕಲ್ಲಿನ ಮೇಲೆ ಹಲವಾರು ಚಿತ್ರಗಳನ್ನು ಬಿಡಿಸಬಹುದು. ಅದೇ ರೀತಿ ಬ್ರಹ್ಮವೆಂಬ ಆಧಾರಶಿಲೆಯ ಮೇಲೆ ಈ ಜಗತ್ತೆಂಬ ಚಿತ್ರವನ್ನು ಬಿಡಿಸಲಾಗಿದೆ. ಬ್ರಹ್ಮವು ಒಂದೇ, ಅದ್ವೈತ ವಸ್ತು. ಜಗತ್ತೆಂಬುದು ಮಿಥ್ಯೆ. ಜಗತ್ತು ತನ್ನ ಅಸ್ತಿತ್ವಕ್ಕೆ ಕೇವಲ ಬ್ರಹ್ಮವಸ್ತುವಿನ ಮೇಲೆ ನಿರ್ಭರಗೊಂಡಿದೆ. ಹಾಗೆ ನೋಡಿದರೆ, ಓ ರಾಮ, ಜಗತ್ತು ಎನ್ನುವುದು ಇಲ್ಲವೇ ಇಲ್ಲ. ಏಕೆಂದರೆ ಎರಡನೆಯ ವಸ್ತುವು ಇರುವುದಕ್ಕೆ ಬೇಕಾದ ಕಾರಣವಾಗಲಿ ಇಲ್ಲವೇ ಕಾರ್ಯವಾಗಲಿ ಬ್ರಹ್ಮನ ವಿಷಯದಲ್ಲಿ ಉದ್ಭವಿಸುವುದೇ ಇಲ್ಲ. ಈ ಜಗತ್ತು ಎನ್ನುವುದು ಬ್ರಹ್ಮನ ಒಂದು ಪ್ರತಿಫಲನ ಮಾತ್ರವೇ ಆಗಿದೆ. ಇರುವುದು ಬ್ರಹ್ಮವೊಂದೇ; ಇದರಲ್ಲಿ ಯಾವ ಸಂದೇಹವೂ ಇಲ್ಲ. ಓ ರಾಮ, ಈಗ ನಾನು ಹೇಳುವ ಶುಕ್ರಾಚಾರ್ಯನ ಕಥೆಯನ್ನು ಗಮನವಿಟ್ಟು ಕೇಳು. ನಾನು ಹೇಳಿದ ತತ್ತ್ವವು ಇದರಿಂದ ಮನದಟ್ಟಾಗುವುದು.''

ಮಂದರ ಪರ್ವತದ ಮೇಲುಗಡೆ ಒಂದು ಸಮತಟ್ಟಿನ ಜಾಗ. ಅನೇಕ ಗಿಡಮರಗಳು, ಸುಂದರವಾದ ಹೂಗಳು – ಆ ನೆಲದಲ್ಲಿ ಕಂಗೊಳಿಸುತ್ತಿದ್ದವು. ಅಲ್ಲಿ ಮುನಿ ಭೃಗು ತಪಸ್ಸು ಮಾಡುತ್ತಿದ್ದನು. ನಿರ್ವಿಕಲ್ಪ ಸಮಾಧಿಯಲ್ಲಿ ತಲ್ಲೀನನಾಗಿದ್ದನು. ಆತನ ಮಗ ಶುಕ್ರ ಪ್ರತಿಭಾವಂತ ಯುವಕ. ನೋಡುವುದಕ್ಕೆ ಬಹು ಸುಂದರವಾಗಿದ್ದನು. ಎಂದೆಂದೂ ತನ್ನ ತಂದೆಯ ಸಂಗಡವೇ ಇರುತ್ತಿದ್ದನು. ಮಂದರ ಪರ್ವತದ ರಮ್ಯ ಕಾನನದಲ್ಲಿ ವಿಹಾರ ಮಾಡಿಕೊಂಡು ಸುಖವಾಗಿ ಕಾಲ ಕಳೆಯುತ್ತಿದ್ದನು.

ಒಂದು ದಿನ ಅವನು ಆಕಾಶ ಮಾರ್ಗದಲ್ಲಿ ವಿಮಾನದಲ್ಲಿ ಸಂಚರಿಸುತ್ತಿರುವ ಒಬ್ಬಳು ಸುಂದರ ಕನ್ನಿಕೆಯನ್ನು ಕಂಡನು. ಆಕೆಯಲ್ಲಿ ಅನುರಕ್ತನಾದನು. ತಪಸ್ವಿಯಾದ ಆತನು ತನ್ನ ಮನಸ್ಸಿನ ಸ್ಪಂದನವನ್ನು ಪರೀಕ್ಷಿಸಿಕೊಂಡನು. ಆದರೂ ತಾನು ಆಶಿಸಿದ ಆ ವಸ್ತುವಿನಲ್ಲಿ ಅವನ ಮನಸ್ಸು ಲೀನವಾಗಿ ಹೋಯಿತು. ಕಣ್ಣು ಮುಚ್ಚಿಕೊಂಡೇ ಅವಳನ್ನು ನೆನೆಯುತ್ತಿದ್ದನು. ಮನಸ್ಸಿನಲ್ಲಿಯೇ ಅವಳನ್ನು ಹಿಂಬಾಲಿಸಿದನು. ಆತನ ಪಾಲಿಗೆ ನೂತನ ಪ್ರಪಂಚವೊಂದು ತೆರೆದುಕೊಂಡಿತು:

ಶುಕ್ರನು ಈಗ ದಿವ್ಯಲೋಕದಲ್ಲಿ ಇದ್ದಾನೆ. ಆ ಯುವತಿಯನ್ನೇ ಹಿಂಬಾಲಿಸುತ್ತಿದ್ದಾನೆ. ಅಲ್ಲಿನ ರಾಜನಾದ ಇಂದ್ರನೇ ಅವನಿಗೆ ಕಂಡುಬರುತ್ತಿದ್ದಾನೆ. ಇಂದ್ರನಿಗೆ ವಿನಯಪೂರ್ವಕವಾಗಿ ಮಣಿದ ಶುಕ್ರ. ಇಂದ್ರ ಗೌರವಪೂರ್ವಕವಾಗಿ ಅವನನ್ನು ಬರಮಾಡಿಕೊಂಡ. ತನ್ನ ಪಕ್ಕದಲ್ಲಿಯೇ ಕುಳ್ಳಿರಿಸಿಕೊಂಡ. ತಾನು ವಾಯುಮಾರ್ಗದಲ್ಲಿ ಕಂಡಿದ್ದ ಯುವತಿಯನ್ನು ಶುಕ್ರನು ಅಲ್ಲಿಯೂ ಕಂಡನು. ಅವಳೂ ಅವನನ್ನು ಮೆಚ್ಚಿಕೊಂಡಳು. ಇಬ್ಬರೂ ಅಲ್ಲಿಯೇ ಸುಖವಾಗಿ ಬಾಳಿದರು. ನಂತರ ಶುಕ್ರನು ಕೆಳಗಿಳಿದು ಬಂದನು.

ಕೆಳಗಿಳಿದು ಬರುವಾಗ, ಆತನ ಜೀವವು ಚಂದ್ರನ ತಣ್ಣನೆಯ ಕಿರಣಗಳ ಸ್ಪರ್ಶಕ್ಕೆ ಒಳಗಾಗಿ, ಮಂಜಾಗಿ ಹೋಯಿತು. ಆ ಮಂಜು ಭತ್ತದ ಗದ್ದೆಗಳ ಮೇಲೆ ಬಿದ್ದಿತು. ಅದನ್ನು ಗಿಡಗಳು ಹೀರಿಕೊಂಡವು. ಇದರಿಂದಾಗಿ ಭತ್ತದ ಕಣಗಳಾದವು. ಅದನ್ನು ಅಕ್ಕಿ ಮಾಡಿ, ದಶಾರ್ಣ ದೇಶದ ಬ್ರಾಹ್ಮಣನೊಬ್ಬನು ತಿಂದನು. ಅವನ ದೇಹದಲ್ಲಿ ಅದು ರೇತಸ್ಸಾಯಿತು. ಕಡೆಗೆ, ಅದು ಅವನ ಪುತ್ರನ ರೂಪವನ್ನು ತಾಳಿತು. ಹೀಗೆ ಶುಕ್ರನೆಂಬ ಜೀವವು ಬ್ರಾಹ್ಮಣಪುತ್ರನ ರೂಪವನ್ನು ತಾಳಿತು.

ಶುಕ್ರನು ಕಾಲಕ್ರಮೇಣ ಮದುವೆಯಾದನು; ಮಗನನ್ನು ಪಡೆದನು. ಮಗನೆಂದರೆ ಅವನಿಗೆ ವಿಪರೀತ ಹುಚ್ಚು. ಹೀಗೆ ಅವನ ಮನಸ್ಸು ಸಂಪೂರ್ಣವಾಗಿ ಪ್ರಾಪಂಚಿಕ ವಸ್ತುಗಳ ವಶವಾಯಿತು. ಅವನು ತನ್ನ ಸಂಸ್ಕಾರ ವಾಸನೆಗಳನ್ನು ಬೆಳೆಸಿಕೊಳ್ಳುತ್ತಲೇ ಹೋದನು. ಅದರಿಂದಾಗಿ ಹಲವಾರು ಜನ್ಮಗಳನ್ನು ತಳೆಯುತ್ತಲೇ ಹೋದನು. ಕೊನೆಗೆ ವೈರಾಗ್ಯವುಂಟಾಗಿ, ವಾಸನೆಗಳು ಕಡಮೆಯಾಗುತ್ತ ಹೋದವು. ಗಂಗಾತಟದಲ್ಲಿನ ಒಬ್ಬ ತಪಸ್ವಿಯ ಮಗನಾಗಿ ಅವನು ಜನ್ಮ ತಾಳಿದನು.

ಇತ್ತ ಭೃಗು ಋಷಿಯ ಆಶ್ರಮದಲ್ಲಿ ಶುಕ್ರನ ದೇಹವು ಹೇಗಿತ್ತೋ ಹಾಗೆಯೇ ಬಿದ್ದುಕೊಂಡಿತ್ತು. ಆದರೆ ಆಹಾರ, ನೀರುಗಳಿಲ್ಲದೆ ನಿತ್ರಾಣವಾಗಿ ಹೋಗಿತ್ತು. ಬರಿ ಅಸ್ಥಿಪಂಜರ ಮಾತ್ರ ಉಳಿದುಕೊಂಡಿತ್ತು. ಇಷ್ಟಾದರೂ ದೇಹ ಕೊಳೆತುಹೋಗಿರಲಿಲ್ಲ. ಅದಕ್ಕೆ ಕಾರಣ, ಗಾಢ ಧ್ಯಾನದಲ್ಲಿ ಮುಳುಗಿದ್ದ ಆತನ ತಂದೆಯ ತಪಶ್ಶಕ್ತಿ.

ಹಲವಾರು ವರ್ಷಗಳು ಹೀಗೆಯೇ ಕಳೆದವು. ಮಹಾನ್ ಋಷಿಯಾದ ಭೃಗುವು ತನ್ನ ಸಮಾಧಿಯಿಂದ ಹೊರಕ್ಕೆ ಬಂದನು. ಕಣ್ಣುಗಳನ್ನು ತೆರೆದನು. ತನ್ನ ಮುಂದೆ ಬಿದ್ದಿದ್ದ ತನ್ನ ಮಗನ ಅಸ್ಥಿಪಂಜರವನ್ನು ಕಂಡು ಕಂಗಾಲಾದನು. ಕೋಪಗೊಂಡು, ಮೃತ್ಯುದೇವತೆಯಾದ ಯಮನಿಗೆ ಶಾಪ ಕೊಡಲು ಸನ್ನದ್ಧನಾದನು.

ಅಷ್ಟರಲ್ಲಿ ಯಮನೇ ಅವನ ಮುಂದೆ ಪ್ರತ್ಯಕ್ಷನಾದನು. ವಾಸ್ತವ ಸಂಗತಿಯನ್ನು ಅವನಿಗೆ ಅರುಹಿದನು. ಹೀಗೆ ಹೇಳಿದನು: ''ಓ ಮುನಿಯೇ, ಈಶ್ವರನ ನಿಯಮವನ್ನು ಪಾಲಿಸುವುದಷ್ಟೇ ನನ್ನ ಕೆಲಸ. ದೈವೇಚ್ಛೆಯನ್ನು ನಾನು ಜಾರಿಗೆ ತರುತ್ತೇನೆ. ದಯವಿಟ್ಟು ಕೋಪಗೊಂಡು, ನಿನ್ನ ತಪಸ್ಸನ್ನು ಕೆಡಿಸಿಕೊಳ್ಳಬೇಡ. ಭಗವಂತನ ನಿಯಮಗಳು ತಿಳಿಯಲು ಅಸಾಧ್ಯವಾದುವು; ಕಠೋರವಾದುವು. ಆದರೆ ಇವೆಲ್ಲಾ ಜಾರಿಯಲ್ಲಿ ಇರುವುದು ದ್ವೈತ ಪ್ರಪಂಚದಲ್ಲಿ ಮಾತ್ರ. ಅದ್ವಿತೀಯವಾದ ನಿರ್ಗುಣ ಬ್ರಹ್ಮವು ಇವೆಲ್ಲ ರೀತಿರಿವಾಜುಗಳಿಗಿಂತ ಹೊರತಾದುದು. ಅದರಲ್ಲಿ ಕ್ರಿಯೆಯಾಗಲಿ, ಭೋಗವಾಗಲಿ – ಇಲ್ಲವೇ ಇಲ್ಲ. ಬ್ರಹ್ಮವಸ್ತುವು ಪರಿಶುದ್ಧವಾದುದು, ಕ್ರಿಯಾಶೂನ್ಯವಾದುದು ಮತ್ತು ನಿರ್ವಿಕಾರವಾದುದು.

''ಅವಿದ್ಯಾಮಯವಾದ ಈ ಜಗತ್ತಿನಲ್ಲಿ ಜನರು ತಮ್ಮ ಪೂರ್ವಜನ್ಮದ ಮನಸ್ಸಿನ ಸಂಕಲ್ಪಗಳಿಗೆ ಅನುಸಾರವಾಗಿ ಹುಟ್ಟುವರು. ತಮ್ಮ ತಮ್ಮ ಕರ್ಮಗಳಿಗೆ ಅನುಸಾರವಾಗಿ ಫಲಗಳನ್ನು ಅನುಭವಿಸುವರು. ನಿನ್ನ ಮಗನಿಗೆ ಇಂಥ ಸ್ಥಿತಿ ಬಂದಿರುವುದು, ಅವನ ಕರ್ಮಕ್ಕೆ ಅನುಸಾರವಾಗಿ. ನಿಜವಾಗಿಯೂ ಅವನ ಕರ್ಮಗಳು ಯಾವುವು ಗೊತ್ತೆ? ಅವನ ಮನಸ್ಸಿನಲ್ಲಿ ಮೂಡಿರುವ ರೂಪಗಳೇ. ಮಾನಸಿಕ ಸಂಕಲ್ಪಗಳೇ ಕ್ರಿಯೆಗಳಾಗಿ ಹೊರಹೊಮ್ಮುವವು. ಅಂಥ ಸಂಕಲ್ಪಗಳನ್ನು ಮಾಡಿಕೊಂಡಿರುವವನು ಅವನೇ. ಹೀಗಾಗಿ ನಿನ್ನ ಮಗನ ದುಸ್ಥಿತಿಗಾಗಿ ನನ್ನನ್ನು ದೂರದಿರು.''

ಯಮನು ತನ್ನ ತತ್ತ್ವಜ್ಞಾನದ ಮಾತನ್ನು ಮುಂದುವರೆಸುತ್ತಿದ್ದಾನೆ: ''ಅವಿದ್ಯೆಗೆ ಸಿಲುಕಿದ ಮನಸ್ಸು ಕೆಡುಕಿನತ್ತ ಬಹುಬೇಗ ಆಕರ್ಷಿತವಾಗುತ್ತದೆ. ಮಕ್ಕಳು ಮಣ್ಣಿನ ಗೊಂಬೆಗಳನ್ನು ಆಟವಾಡುತ್ತ ಒಡೆದುಹಾಕುವುದಿಲ್ಲವೇ? ಹಾಗೆಯೇ ಇದು. ತನ್ನ ಆಸೆಗಳಿಂದ ಮನಸ್ಸು ಪ್ರಪಂಚಕ್ಕೆ ಕಟ್ಟಿಹಾಕಿಕೊಳ್ಳುತ್ತದೆ; ಎಲ್ಲ ಬಗೆಯ ಪ್ರಾಪಂಚಿಕ ಆಕಾಂಕ್ಷೆಗಳು ಮತ್ತು ಅಪೇಕ್ಷೆಗಳಿಂದ ಬಿಡಿಸಿಕೊಂಡಾಗ ಜೀವನು ಮುಕ್ತಿಯ ಸ್ವಾತಂತ್ರ್ಯವನ್ನು ಪಡೆದುಕೊಳ್ಳುತ್ತಾನೆ.

'' 'ಇದು ನನ್ನ ದೇಹ' ಎಂದು ಭಾವಿಸುವುದು ಮನಸ್ಸೇ. ಮನಸ್ಸಿನಲ್ಲಿ ತಾನೇ ದೇಹಭಾವ ಮೂಡುವುದು. ಮನಸ್ಸಿಲ್ಲದೆ, ದೇಹವೇ ಇಲ್ಲ! ಮನಸ್ಸಿದ್ದರೆ ಮಾತ್ರ ಜೀವಭಾವ. ಇಲ್ಲದಿದ್ದರೆ ಆತ್ಮ ಭಾವ! ಮನಸ್ಸೇ 'ಇದು ಸರಿ, ಇದು ಸರಿಯಲ್ಲ' ಎಂದು ನಿಶ್ಚಯಿಸಿದರೆ, 'ಬುದ್ಧಿ' ಎಂದೆನಿಸಿಕೊಳ್ಳುತ್ತದೆ. ಮನಸ್ಸೇ 'ನಾನು', 'ನನ್ನದು' ಎಂಬ ಭಾವವನ್ನು ತಳೆದರೆ 'ಅಹಂಕಾರ' ಎನಿಸಿಕೊಳ್ಳುತ್ತದೆ. ತನ್ನ ಹಲವಾರು ಕಾರ್ಯಗಳ ಅನುಸಾರವಾಗಿ ಮನಸ್ಸೇ ಹಲವಾರು ಹೆಸರುಗಳನ್ನು ಪಡೆದುಕೊಳ್ಳುತ್ತ ಹೋಗುತ್ತದೆ. ಹಾಗೆಯೇ ಇಡೀ ಜಗತ್ತಿನ ಸೃಷ್ಟಿಯೆಂಬುದು ಮನಸ್ಸಿನ ಸೃಷ್ಟಿಯೇ ಆಗಿದೆ. ಜಗತ್ತಿನ ಹಲವಾರು ವೈವಿಧ್ಯಗಳೆಲ್ಲ ಮನಸ್ಸಿನ ಹತ್ತುಹಲವು ಬಗೆಗಳೇ ಆಗಿವೆ.

''ಭೃಗು ಋಷಿಯೇ, ನೀನು ಸಮಾಧಿಯಲ್ಲಿ ಮಗ್ನನಾಗಿದ್ದಾಗ, ನಿನ್ನ ಮಗನ ಮನಸ್ಸು ದೇವಲೋಕಕ್ಕೆ ಹಾರಿಹೋಯಿತು. ಅವನು ವಿಶ್ವವಸು ಎಂಬ ದೇವಕನ್ನಿಕೆಯ ಸಂಗವನ್ನು ಮಾಡಿದನು. ಅನಂತರ ಅವನು ದೇವಲೋಕವನ್ನು ತ್ಯಜಿಸಿದನು. ದಶಾರ್ಣ ದೇಶದಲ್ಲಿ ಬ್ರಾಹ್ಮಣನೊಬ್ಬನ ಮಗನಾಗಿ ಹುಟ್ಟಿದನು. ಅನೇಕಾನೇಕ ಜನ್ಮಗಳನ್ನು ಪಡೆದನು. ಅದೆಲ್ಲ ಅವನ ಮಾನಸಿಕ ಸಂಸ್ಕಾರಗಳ ಫಲ. ಅವುಗಳನ್ನು 'ವಾಸನೆಗಳು' ಎಂದು ಕರೆಯುತ್ತಾರೆ. ಕಡೆಯದಾಗಿ, ಈಗ ಅವನು ಬ್ರಾಹ್ಮಣ ಋಷಿಯೊಬ್ಬನ ಮಗನಾಗಿ ಹುಟ್ಟಿದ್ದಾನೆ. ವಸುದೇವ ಎಂಬ ಹೆಸರಿನಿಂದ ಗಂಗಾ ನದಿಯ ತಟದಲ್ಲಿ ವಾಸಿಸುತ್ತಿದ್ದಾನೆ. ಈ ಜನ್ಮದಲ್ಲಿ ಅವನು ತನ್ನ ಇಂದ್ರಿಯಗಳ ಮೇಲೆ ಜಯವನ್ನು ಸಾಧಿಸಿದ್ದಾನೆ. ಅನೇಕ ವರ್ಷಗಳ ಕಾಲ ತಪಸ್ಸು ಮಾಡುತ್ತಿದ್ದಾನೆ. ಓ ಋಷಿಯೇ, ನಿನ್ನ ಮಗನು ಯಾವ ಯಾವ ಜನ್ಮಗಳನ್ನು ಹಾದುಹೋದನೆಂದು ತಿಳಿಯಲು ನೀನು ಇಚ್ಛಿಸುವೆಯಾದರೆ, ನಿನ್ನ ದಿವ್ಯದೃಷ್ಟಿಯ ಮೂಲಕ ನೀನು ಅವೆಲ್ಲವನ್ನೂ ಕಣ್ಣಾರೆ ಕಾಣಬಹುದು.''

ಭೃಗು ಮುನಿಯು ಧ್ಯಾನಮಗ್ನನಾದನು. ತನ್ನ ಮಗನ ಜನ್ಮಗಳ ವೃತ್ತಾಂತವೆಲ್ಲವೂ ಅವನ ಮನಸ್ಸಿನ ಪರದೆಯ ಮೇಲೆ ಹಾದುಹೋಯಿತು. ಅವನು ಯಮನಿಗೆ ಹೀಗೆಂದನು: ''ದಯವಿಟ್ಟು ನನ್ನನ್ನು ಕ್ಷಮಿಸು. ತಿಳಿಯದೆ ನಿನಗೆ ಶಾಪಕೊಡಲು ಮುಂದಾಗಿಬಿಟ್ಟಿದ್ದೆ. ನೀನು ಸರ್ವಜ್ಞ. ನೀನು ಜಗತ್ತಿನ ಧರ್ಮ ನಿಯಾಮಕ. ತ್ರಿಕಾಲಗಳಲ್ಲಿಯೂ ಆಗುವುದನ್ನು ತಿಳಿಯಲು ನಿನಗೊಬ್ಬನಿಗೇ ಸಾಧ್ಯ. ನೀನು ಭೂತ ಭವಿಷ್ಯತ್ತುಗಳ ದೇವರು.''

ನಂತರ ಯಮನು ಭೃಗುವನ್ನು ಗಂಗಾನದಿಯ ತಟಕ್ಕೆ ಕರೆದುಕೊಂಡು ಹೋದನು. ಅಲ್ಲಿ ವಸುದೇವನು ಧ್ಯಾನಮಾಡುತ್ತಿದ್ದನು. ಅವನೇ ಹಿಂದಿನಯಾವುದೋ ಒಂದು ಜನ್ಮದಲ್ಲಿ ಭೃಗುವಿಗೆ ಮಗನಾಗಿ ಹುಟ್ಟಿದ್ದವನು. ವಸುದೇವನು ಯಮನ ಇಚ್ಛೆಯಂತೆ ಕಣ್ಣು ತೆರೆದನು. ಯಮನು ಮುನಿ ಭೃಗುವಿನ ಜೊತೆಗೆ ನಿಂತಿರುವುದನ್ನು ಕಂಡನು. ಮೇಲೆದ್ದು ಪ್ರಣಾಮ ಮಾಡಿದನು. ಮೂವರೂ ಒಂದು ಕಲ್ಲು ಹಾಸುಗೆಯ ಮೇಲೆ ಕುಳಿತುಕೊಂಡರು.

ವಸುದೇವ: ನಿಮ್ಮ ಆಗಮನದಿಂದ ನಾನು ಧನ್ಯನಾದೆನು. ಪವಿತ್ರನಾದೆನು. ನಾನೀಗ ಆನಂದಭರಿತನಾಗಿದ್ದೇನೆ.

ಭೃಗು: ಮಗೂ, ನಿನಗೆ ಆತ್ಮಜ್ಞಾನ ಉಂಟಾಗಲಿ. ಅಜ್ಞಾನದಿಂದ ನಿನಗೆ ಮುಕ್ತಿ ಸಿಗಲಿ. ಎಂದೆಂದೂ ನೀನು ಬ್ರಹ್ಮಾನಂದವನ್ನು ಅನುಭವಿಸುವಂತಾಗಲಿ!

ವಸುದೇವನು ತನ್ನ ಹಿಂದಿನ ಜನ್ಮಗಳನ್ನೆಲ್ಲ ಸ್ಮರಣೆಗೆ ತಂದುಕೊಂಡು ಆಶ್ಚರ್ಯಭರಿತನಾದನು. ''ಭಗವಂತನ ನಿಯಮವೆಂಬುದು ನಿಜಕ್ಕೂ ಅಪೂರ್ವವಾದುದು. ಅನಾದಿ ಮತ್ತು ಅನಂತವಾದುದು. ಆತನ ಮಹಾನ್ ಶಕ್ತಿಯಿಂದಲೇ ಈ ಜಗತ್ತೆಲ್ಲವೂ ನಡೆಯುತ್ತಿರುವುದು. ನಾನು ನನ್ನ ಪೂರ್ವಜನ್ಮಗಳಲ್ಲಿ ನೂರಾರು

ಕಷ್ಟ, ತಾಪತ್ರಯಗಳಿಗೆ ಸಿಕ್ಕಿ ಬೆಂದಿದ್ದೇನೆ. ಬಹಳ ಕಾಲದವರೆಗೆ ಸಂಸಾರದಲ್ಲಿ ಸಿಕ್ಕಿ ನರಳಿದ್ದೇನೆ. ಏನೇನನ್ನು ಅನುಭವಿಸಬೇಕೋ, ಎಲ್ಲವನ್ನೂ ಅನುಭವಿಸಿದ್ದೇನೆ. ಈಗ ನಾನು ಆತ್ಮಜ್ಞಾನವನ್ನು ಹೊಂದಿ ಆನಂದದಿಂದ ಇದ್ದೇನೆ. ಜನ್ಮಾಂತರಗಳಿಂದ ಕೂಡಿದ ಈ ಸಂಸಾರದಿಂದ ಬಿಡಿಸಿ ಕೊಂಡಿದ್ದೇನೆ. ತಂದೆ, ಬನ್ನಿ, ಹೋಗೋಣ. ಮಂದರ ಪರ್ವತದಲ್ಲಿ ಹಾಳುಬಿದ್ದಿರುವ ನನ್ನ ಪೂರ್ವಜನ್ಮದ ಶರೀರವನ್ನು ನೋಡಿ ಬರೋಣ.''

ಅನಂತರ ಮೂವರೂ ಮಂದರಪರ್ವತಕ್ಕೆ ಹೋದರು. ಭೃಗುವಿನ ಮಗನಾಗಿದ್ದ ತನ್ನ ಪೂರ್ವಜನ್ಮದ ದೇಹವು ಹಾಗೆಯೇ ಬಿದ್ದಿರುವುದನ್ನು ವಸುದೇವ ನೋಡಿದ. ಅವನು ತನ್ನ ತಂದೆಗೆ ಹೀಗೆ ಹೇಳಿದ: ''ಓ ತಂದೆ, ನೋಡು ಈ ದೇಹವನ್ನು! ಮೂಳೆಗಳ ಚಕ್ಕಳದಂತೆ ಕಾಣುತ್ತಿದೆ! ಅದೆಷ್ಟು ಬಗೆಯ ಭಕ್ಷ್ಯಭೋಜ್ಯಗಳಿಂದ ಈ ದೇಹವು ಪೋಷಿತವಾಗಿತ್ತು! ಇದನ್ನು ಸುಂದರವಾಗಿ ಇಡಲು ಅದೆಷ್ಟು ಗಂಧಚಂದನಗಳನ್ನು ಲೇಪಿಸಲಾಗಿತ್ತು! ಆದರೂ ಇದರ ಅವಸ್ಥೆ ಹೇಗಿದೆ ನೋಡು! ಮನಸ್ಸಿನ ಅವಸಾನವಾಗದ ಹೊರತು ಆತ್ಯಂತಿಕ ಆನಂದವನ್ನು ಪಡೆಯಲಾಗುವುದಿಲ್ಲ. ಬ್ರಹ್ಮಜ್ಞಾನ ಅಥವಾ ಆತ್ಮಜ್ಞಾನವನ್ನು ಪಡೆದಾಗ ಮಾತ್ರ ಆನಂದಸಾಗರದಲ್ಲಿ ನಿಮಗ್ನರಾಗಬಹುದು. ಆಗ ಸಂಸಾರದ ಎಲ್ಲ ರೀತಿಯ ಭೀಕರ ದುಃಖದಾರಿದ್ರ್ಯಗಳಿಂದ ಮುಕ್ತರಾಗಬಹುದು.''

ಆಗ ಯಮನು ಹೇಳಿದನು: ''ಓ ಶುಕ್ರ! ನೀನು ವಸುದೇವನ ಈ ದೇಹವನ್ನು ತ್ಯಜಿಸು. ರಾಜನು ಅರಮನೆಯನ್ನು ಪ್ರವೇಶಿಸುವಂತೆ ಈ ಹಳೆಯ ಮೃತದೇಹವನ್ನು ಪ್ರವೇಶಿಸು. ಈ ದೇಹದಲ್ಲಿ ಇದ್ದುಕೊಂಡೇ ಅಸುರರ ಗುರುವಾಗಿ ಅವರಿಗೆ ಸರಿಯಾದ ಮಾರ್ಗದರ್ಶನವನ್ನು ಮಾಡು.''

ಅದರಂತೆಯೇ ಶುಕ್ರನು ವಸುದೇವನ ದೇಹವನ್ನು ತ್ಯಜಿಸಿದನು. ಯಮದೇವನ ಆದೇಶದಂತೆ ತನ್ನ ಹಿಂದಿನ ದೇಹವನ್ನು ಪ್ರವೇಶಿಸಿದನು. ಮಳೆಗಾಲದಲ್ಲಿ ಬರಡು ನದಿಯಲ್ಲಿಯೂ ನೀರು ಹರಿದು ಜೀವಂತಿಕೆ ಎದ್ದು ಕಾಣುತ್ತದೆ. ಅದರಂತೆ ಆ ದೇಹದಲ್ಲಿ ಜೀವವು ಪ್ರವೇಶಿಸಿದಾಗ, ನರನಾಡಿಗಳಲ್ಲಿ ರಕ್ತವು ಹರಿದು, ಜೀವಂತಿಕೆಯಿಂದ ಕಂಗೊಳಿಸಿತು. ಮಾಂಸಮಜ್ಜೆಗಳು ಪ್ರಾಣಶಕ್ತಿಯಿಂದ ಶಕ್ತಿಸಂಪನ್ನವಾದವು. ಪ್ರಾಣವು ನಿರಾಯಾಸವಾಗಿ ದೇಹದ ತುಂಬ ಹರಿಯಲು ಆರಂಭಿಸಿತು.

ತನ್ನ ಮಗನ ಮೃತದೇಹದಲ್ಲಿ ಪ್ರಾಣವು ಮರುಕಳಿಸಿದ್ದನ್ನು ಕಂಡ ಭೃಗುವು ತನ್ನ ಕಮಂಡಲುವಿನಿಂದ ಮಂತ್ರಪೂರಿತ ಜಲವನ್ನು ಪ್ರೋಕ್ಷಿಸಿ ಅದನ್ನು ಶುದ್ಧಿಗೊಳಿಸಿದನು. ಶುಕ್ರನು ನೆಲದಿಂದ ಮೇಲೆದ್ದು ತನ್ನ ತಂದೆಗೆ ನಮಸ್ಕರಿಸಿದನು. ತಂದೆಯು ತನ್ನ ಪುತ್ರನನ್ನು ಅಪ್ಪಿಕೊಂಡು, ಪ್ರೀತಿಯ ಕಣ್ಣೀರನ್ನು ಹರಿಸಿದನು. ಇಬ್ಬರೂ ಈ ಮಿಲನದಿಂದ ಸಂತೋಷಹೊಂದಿದರು. ಮಗ ಮತ್ತು ತಂದೆ – ಇಬ್ಬರೂ ಈ ಜೀವನ್ಮುಕ್ತಾವಸ್ಥೆಯಲ್ಲಿ ದಿನಗಳನ್ನು ಕಳೆದರು. ಕಾಲಕ್ರಮೇಣ ಶುಕ್ರನು ಅಸುರರ ಆಚಾರ್ಯನಾದನು. ಭೃಗುವು ಮಾನವರಲ್ಲಿ ಸರ್ವಶ್ರೇಷ್ಠ ಗುರುವಾಗಿಯೇ ಜೀವಿಸಿದ್ದನು. ✴

## ಯುವಚೇತನ



**ಬಾ**ಲ್ಯಾರಭ್ಯದಿಂದ ಮನುಷ್ಯರಿಗೆ ಅವರು ಪಾಪಿಗಳೆಂದೂ, ಅಬಲರೆಂದೂ ಬೋಧಿಸಲಾಗಿದೆ. ಅವರೆಲ್ಲರೂ ಮಹಾಮಹಿಮರಾದ ಅಮೃತಾತ್ಮನ ಮಕ್ಕಳೆಂಬುದನ್ನು ಬೋಧಿಸಿ. ಯಾರು ಅತ್ಯಂತ ದುರ್ಬಲರಾಗಿರುವರೋ ಅವರಿಗೂ ಕೂಡ ಹೀಗೆ ಹೇಳಿ. ಅವರಿಗೆ ನೆರವಾಗುವಂತಹ ಸ್ಪಷ್ಟವಾದ, ಬಲಯುತವಾದ ಭಾವನೆಗಳು ಬಾಲ್ಯಾರಭ್ಯ ಅವರ ಮೆದುಳಿಗೆ ಸೇರಲಿ. ಈ ಭಾವನೆಯ ಪ್ರಭಾವಕ್ಕೆ ಅವರು ಒಳಗಾಗಲಿ. ನಮ್ಮನ್ನು ದುರ್ಬಲರನ್ನಾಗಿ ಮಾಡುವ, ಅಂಜುವಂತೆ ಮಾಡುವ ಆಲೋಚನೆಗಳಿಗೆ ಆಸ್ಪದ ಕೊಡಬೇಡಿ. ನಿಮ್ಮ ಮನಸ್ಸಿಗೇ, ''ಶಿವೋऽಹಂ'' ಎಂದು ಹೇಳಿ. ಮರಣ ಕಾಲದಲ್ಲಿ ಕೂಡ ''ನಾನೆ ಅವನು'' ಎಂದು ಸಾರಿ. ಅದೇ ಸತ್ಯ. ಪ್ರಪಂಚದ ಅನಂತ ಶಕ್ತಿಯ ಆಗರ ನಿಮ್ಮಲ್ಲಿದೆ.

**ನಾ**ವು ಪವಿತ್ರಾತ್ಮರೆಂದು ಹೇಳಿಕೊಳ್ಳುವುದು ಮತ್ತು ಇತರರಿಗೂ ಈ ಅಭಿಪ್ರಾಯವನ್ನು ಬೋಧಿಸುವುದು, ಇದೊಂದೇ ನಾವು ಗುರಿಯನ್ನು ಮುಟ್ಟಬೇಕಾದರೆ ಇರುವ ಏಕೈಕ ಮಾರ್ಗ. ನಾವು ಇದನ್ನು ಮನನ ಮಾಡುತ್ತಿದ್ದರೆ ಶಕ್ತಿ ಬರುವುದು. ನಮ್ಮ ಧ್ವನಿ ಶಕ್ತಿಪೂರಿತವಾಗುತ್ತಾ ಬರುವುದು. ಕೊನೆಗೆ ನಮ್ಮ ಹೃದಯವನ್ನು ತನ್ನ ವಶಕ್ಕೆ ತೆಗೆದುಕೊಳ್ಳುವುದು. ಅದು ನಮ್ಮ ನಾಡಿಯಲ್ಲಿ ಸಂಚರಿಸುವುದು, ದೇಹದಲ್ಲೆಲ್ಲಾ ಹಾಸು–ಹೊಕ್ಕಾಗುವುದು.

**ಯಾ**ವ ಶಕ್ತಿ ಸಮಾಧಾನಗಳನ್ನು ನೀನು ಆಶಿಸುತ್ತಿರುವೆಯೋ ಅವೆಲ್ಲಾ ಆಗಲೇ ನಿನ್ನಲ್ಲಿವೆ. ಆದಕಾರಣ ನಿನ್ನ ಭವಿಷ್ಯವನ್ನು ನೀನೇ ರೂಪಿಸಿಕೊ. ಆದದ್ದು ಆಯಿತು, ಅನಂತ ಭವಿಷ್ಯ ನಿನ್ನ ಮುಂದಿದೆ. ನೀನು ಮಾಡುವ ಪ್ರತಿಯೊಂದು ಆಲೋಚನೆ, ಕೆಲಸ, ಆಡಿದ ಮಾತು ಕೂಡ ಮನಸ್ಸಿನಲ್ಲಿ ತನ್ನ ಪರಿಣಾಮವನ್ನು ಬೀರುವುದು ಎಂಬುದನ್ನು ಸದಾ ನೆನಪಿನಲ್ಲಿಡು. ಕೆಟ್ಟ ಆಲೋಚನೆ ಮತ್ತು ಕೆಟ್ಟ ಕೆಲಸಗಳ ದುಷ್ಪರಿಣಾಮ ನಿನ್ನ ಮೇಲೆ ವ್ಯಾಘ್ರದಂತೆ ನೆಗೆಯಲು ಸಿದ್ಧವಾಗಿದ್ದರೆ, ನೀನು ಮಾಡಿದ ಒಳ್ಳೆಯ ಆಲೋಚನೆ ಮತ್ತು ಒಳ್ಳೆಯ ಕೆಲಸಗಳ ಪರಿಣಾಮ, ಲಕ್ಷಾಂತರ ದೇವಗಣಗಳ ಶಕ್ತಿಸಮೂಹದೊಂದಿಗೆ ನಿನ್ನನ್ನು ರಕ್ಷಿಸಲು ಎಂದೆಂದೂ ಕಾಯುತ್ತಿದೆ.

ಜಪಾನಿನ ಕಥೆಗಳು

# ಸಾರಸ ಪಕ್ಷಿಯ ಕಥೆ

ಬಂಗಾಳಿ ಮೂಲ : ರಾಜಕೃಷ್ಣ ಭಟ್ಟಾಚಾರ್ಯ ಚಿತ್ರ : ಜುಂಕೋ ಭಟ್ಟಾಚಾರ್ಯ ಕನ್ನಡಾನುವಾದ : ಗಿರಿಜಾದೇವಿ

ಅನೇಕ ವರ್ಷಗಳ ಹಿಂದೆ ಹಿಮವೃಷ್ಟಿಯಾಗುತ್ತಿದ್ದ ಒಂದು ದಿನ ಬೆಳಗ್ಗೆ, ಮುದುಕನೊಬ್ಬ ತನ್ನ ಕೆಲಸಕ್ಕಾಗಿ ಹೊರಟಿದ್ದ. ರಸ್ತೆಯಲ್ಲಿ ಒಂದು ಕಡೆ, ಬಲೆಯಲ್ಲಿ ಸಿಕ್ಕಿ ಬಿದ್ದಿದ್ದ ಒಂದು ಸಾರಸ ಪಕ್ಷಿಯನ್ನು ನೋಡಿದ. ಯಾರೋ ದುಷ್ಟ ಬಲೆ ಹರಡಿ ಹೋಗಿದ್ದ. ಈ ಪಕ್ಷಿ ಅದರಲ್ಲಿ ಸಿಕ್ಕಿ ಹಾಕಿಕೊಂಡಿತ್ತು, ಮುದುಕ ಸಾವಧಾನವಾಗಿ ಪಕ್ಷಿಯನ್ನು ಬಲೆಯಿಂದ ಬಿಡಿಸಿದ. ಪಕ್ಷಿ ಕೂಡಲೇ ಆನಂದದಿಂದ ಹಾರಿಹೋಯಿತು. ಮುದುಕ ಮನೆಗೆ ಹಿಂದಿರುಗಿದ ನಂತರ ಮುದುಕಿಗೆ ಈ ವಿಷಯವನ್ನು ತಿಳಿಸಿದ. ಅದೇ ದಿನ ರಾತ್ರಿ ಅವರ ಮನೆಯ ಬಾಗಿಲನ್ನು ಯಾರೋ ಖಟ ಖಟ ಬಡಿದು ಶಬ್ದಮಾಡಿದರು. ಯಾರೋ ಬಂದರು ಎನ್ನುತ್ತಾ ಮುದುಕ ಮುದುಕಿ ಇಬ್ಬರೂ ಆತುರಾತುರವಾಗಿ ಬಂದು ಬಾಗಿಲು ತೆರೆದು ನೋಡಿದರು. ಬಾಗಿಲ ಬಳಿ ಸುಂದರಿಯಾದ ಯುವತಿಯೊಬ್ಬಳು ನಿಂತಿದ್ದಳು. ಅವಳು ಹೇಳಿದಳು, ''ನಾನು ಹಿಮವೃಷ್ಟಿಗೆ ಸಿಕ್ಕಿಕೊಂಡೆ. ನಿಮ್ಮೊಂದಿಗೆ ಇರಲು ಆಶಿಸುತ್ತೇನೆ.'' ಮುದುಕ ಮುದುಕಿ ಇಬ್ಬರೂ ಸಮ್ಮತಿಸಿ ಅವಳಿಗೆ ತಮ್ಮ ಮನೆಯಲ್ಲಿ ಇರಲು ಅನುಮತಿ ನೀಡಿದರು. ಮರುದಿನ ಬೆಳಿಗ್ಗೆ ಮುದುಕಿ ಎದ್ದು ನೋಡುತ್ತಾಳೆ, ಆ ಯುವತಿ ಆಗಲೇ ಮನೆಯ ಎಲ್ಲಾ ಕೆಲಸಕಾರ್ಯಗಳನ್ನೂ ಪ್ರಾರಂಭಿಸಿಬಿಟ್ಟಿದ್ದಾಳೆ! ಈ ಮುದಿ ದಂಪತಿಗೆ ಯಾರೂ ಇರಲಿಲ್ಲ , ಇವಳು ಬಂದದ್ದು ಅವರಿಗೆ ಬಹಳ ಸಂತೋಷವನ್ನುಂಟುಮಾಡಿತ್ತು. ದಿನಪೂರ್ತಿ ಬಹಳ ಆನಂದದಲ್ಲಿ ಕಳೆದುಹೋಯಿತು. ಯುವತಿ ಬಹಳ ಖುಷಿಯಿಂದ ಮತ್ತು ಉತ್ಸಾಹದಿಂದ ಮನೆಯ ಎಲ್ಲಾ ಕೆಲಸಗಳನ್ನೂ ಮಾಡಿಕೊಟ್ಟಳು. ರಾತ್ರಿ ಮಲಗುವುದಕ್ಕೆ ಮೊದಲು ಹೇಳಿದಳು, ''ನಾನು ನಿಮಗಾಗಿ ತುಂಬಾ ಸುಂದರವಾದ ಬಟ್ಟೆ ತಯಾರಿಸಿ ಕೊಡುತ್ತೇನೆ. ಆದರೆ, ನಾನು ನನ್ನ ಕೋಣೆಯಲ್ಲಿ ಬಟ್ಟೆಯನ್ನು ತಯಾರು ಮಾಡುವಾಗ ನೀವು ಯಾರೂ ಬಂದು ನೋಡಬಾರದು.'' ಮರುದಿನ ಬೆಳಗ್ಗೆ ಅತ್ಯಂತ ಸುಂದರವಾದ ಒಂದು ಬಟ್ಟೆಯನ್ನು ಅವರಿಗೆ ಬಹುಮಾನವಾಗಿ ಕೊಟ್ಟಳು. ಆ ಬಟ್ಟೆ ನೋಡಿ ಮುದುಕಿ ಕಣ್ಣರಳಿಸಿದಳು. ಮುದುಕನಿಗೆ ಆಶ್ಚರ್ಯವೋ ಆಶ್ಚರ್ಯ. ಅತ್ಯಂತ ನವಿರಾದ ಆ ವಸ್ತ್ರ ಅಸಾಧಾರಣವಾಗಿತ್ತು. ಮುದುಕಿ ಅದನ್ನು ಬಹು ಎಚ್ಚರಿಕೆಯಿಂದ ಜೋಪಾನಮಾಡಿ ಬಜಾರಿನಲ್ಲಿ ಮಾರಿಕೊಂಡು ಬರಲು ಹೊರಟಳು. ಬಜಾರಿನಲ್ಲಿ ಈ ವಸ್ತ್ರವನ್ನು ಕಂಡ ರಾಜ ಮೋಹಿತನಾಗಿ ಹೋದ! ಬಟ್ಟೆಯ ಗುಣಮಟ್ಟವನ್ನು ಬಹಳವಾಗಿ ಪ್ರಶಂಸಿಸುತ್ತಾ, ಅಧಿಕ ಬೆಲೆ ಕೊಟ್ಟು ಖರೀದಿಸಿದ. ಮುದುಕಿ ಮನೆಗೆ ಬಂದು ಈ ವಿಷಯ ತಿಳಿಸಿದಳು. ಆಗ ಯುವತಿ ಇನ್ನೂ ಸುಂದರವಾದ ವಸ್ತ್ರವನ್ನು ಮರುದಿನ ತಯಾರಿಸಿ ಕೊಡುವುದಾಗಿ ಹೇಳಿದಳು. ಇದೇ ರೀತಿಯಲ್ಲಿ ಪ್ರತಿದಿನವೂ ಒಂದೊಂದು ವಸ್ತ್ರ ತಯಾರಿಸಿ ಕೊಡತೊಡಗಿದಳು. ಮುದುಕಿ ಬಜಾರಿನಲ್ಲಿ ಮಾರಿ ಒಳ್ಳೆಯ ಲಾಭ ಗಳಿಸತೊಡಗಿದಳು. ಆದರೆ ಯುವತಿ ದಿನೇದಿನೇ ಕ್ಷೀಣಿಸುತ್ತಾ ಸಣ್ಣಗಾಗುತ್ತಿದ್ದುದನ್ನು ಮುದುಕಿ ಗಮನಿಸಿದಳು. ಮುದುಕ ಮುದುಕಿಯನ್ನು ವಿಚಾರಿಸಿದ, ''ನಾವು ಈ ಯುವತಿಯನ್ನು ಸರಿಯಾಗಿ ನೋಡಿಕೊಳ್ಳುತ್ತಿದ್ದೇವೆ ತಾನೆ?''



ಹೀಗೆ ದಿನೇದಿನೇ ಸವೆದು ಹೋಗುತ್ತಿದ್ದ ಯುವತಿಯನ್ನು ಕಂಡು ಮುದುಕಿ ದುಃಖಿತಳಾದಳು. ಇದಕ್ಕೆ ಕಾರಣವೇನೋ ಅವಳಿಗೆ ತಿಳಿಯಲಿಲ್ಲ. ಆದ್ದರಿಂದ ಮುದುಕಿ ಕುತೂಹಲ ತಾಳಲಾರದೆ, ಒಂದು ದಿನ ರಾತ್ರಿ ಯುವತಿ ಏನು ಮಾಡುತ್ತಿದ್ದಾಳೆಂದು ನೋಡಲು ಅವಳ ಕೋಣೆಯ ಬಾಗಿಲನ್ನು ಸ್ವಲ್ಪವೇ ತೆರೆದಳು. ಅಲ್ಲಿ ಒಂದು ಸಾರಸ ಪಕ್ಷಿ ತನ್ನ ಪುಕ್ಕಗಳನ್ನು ತನ್ನ ಕೊಕ್ಕಿನಿಂದಲೇ ಕಿತ್ತು ತೆಗೆದು ಮೃದುವಾದ ವಸ್ತ್ರ ತಯಾರಿಸುತ್ತಿತ್ತು. ಆದರೆ, ಸಾರಸ ಪಕ್ಷಿ ಮುದುಕಿಯನ್ನು ನೋಡಿಬಿಟ್ಟಿತು. ಅದು ಮುದುಕಿಗೆ ಹೇಳಿತು, ''ನಿನ್ನ ಗಂಡ ರಕ್ಷಿಸಿದ ಸಾರಸಪಕ್ಷಿ ನಾನೇ. ಅದಕ್ಕಾಗಿಯೆ ನಾನು ಉಪಕಾರ ಸ್ಮರಣೆಯಿಂದ ಈ ರೀತಿ ಉಡುಗೊರೆ ಕೊಡುತ್ತಿದ್ದೇನೆ. ಆದರೆ ನೀನು ನನ್ನ ನಿಬಂಧನೆಯನ್ನು ಮೀರಿದೆ. ಆದುದರಿಂದ ನಾನು ಈಗ ಹಾರಿ ಹೋಗುತ್ತೇನೆ.'' ಹೀಗೆ ಹೇಳಿ ಸಾರಸಪಕ್ಷಿ ಆಕಾಶಕ್ಕೆ ಹಾರಿತು.

# ವಿಭೀಷಣನ ಶರಣಾಗತಿ

**ಕಥೆ:** ಪುಲವರ್ ಕೀರನ್, ಎ. ಆರ್ಮುಗಂ ಮತ್ತು ಸುಂದರಿ ಸುಂದರಂ  **ಚಿತ್ರ:** ಶಂಕರ್

**1** ರಾಮ-ರಾವಣರ ಯದ್ಧ ನಡೆಯುತ್ತಿದ್ದಾಗ ಒಂದು ದಿನ...



**2** ವಿಭೀಷಣ, ಯುದ್ಧಭೂಮಿಯಲ್ಲಿ ನನಗೆ ಎದುರಾಗಿ ಒಬ್ಬ ತರುಣ ರಾಕ್ಷಸ ನಿಂತಿದ್ದನ್ನು ನೋಡಿದೆಯಾ? ಅವನು ತುಂಬ ಶೂರನಂತೆ ಕಾಣಿಸುತ್ತಿದ್ದಾನೆ.




**3** ರಾಮ, ನೀನು ನನ್ನನ್ನು ಕೇವಲ ಬಾಲಕನೆಂದು ಲಘುವಾಗಿ ತಿಳಿದು ಯುದ್ಧ ಮಾಡಿದೆ ಎಂದಾದರೆ, ಸೋಲು ನಿನಗೆ ಕಟ್ಟಿಟ್ಟ ಬುತ್ತಿ. ಈಗಲೇ ನಿನಗೆ ಎಚ್ಚರಿಕೆ ಹೇಳುತ್ತಿದ್ದೇನೆ!

ಓ! ನೋಡಲು ಮಾತ್ರ ಇವನು ಬಾಲಕ. ಶೌರ್ಯವೆಂಬುದು ಇವನಲ್ಲಿ ಮನೆ ಮಾಡಿದೆ!



4




5




6




7




ಅವರ ನಡುವೆ ಭಯಾನಕ ಯುದ್ಧ ನಡೆಯಿತು. ಆ ತರುಣ ರಾಕ್ಷಸ ಬಿಟ್ಟ ಎಲ್ಲ ಬಾಣಗಳಿಗೂ ರಾಮನು ತಕ್ಕ ಪ್ರತ್ಯಸ್ತ್ರಗಳನ್ನು ಎಸೆದು ಅವುಗಳನ್ನೆಲ್ಲ ನಾಶಮಾಡಿದ. ಯುದ್ಧ ಕೊನೆಯಾಗುತ್ತ ಬಂತು. ತರುಣ ರಾಕ್ಷಸ ಆಯಾಸದಿಂದ ಕ್ಷೀಣಿಸತೊಡಗಿದ.

**8**




ರಾಮ ಅವನತ್ತ ಒಂದು ಮಾರಕಾಸ್ತ್ರವನ್ನೆಸೆದು ಆ ತರುಣನ ಸಂಹಾರ ಮಾಡಿದ.

**9** ವಿಭೀಷಣ ಮುಖವನ್ನು ಮುಚ್ಚಿಕೊಂಡು, ಕಣ್ಣೀರು ಸುರಿಸುತ್ತಾ ಕಲ್ಲಿನಂತೆ ನಿಂತುಬಿಟ್ಟ. ರಾಕ್ಷಸ ನೆಲದ ಮೇಲೆ ಬಿದ್ದಿದ್ದ. ರಾಮನ ಬಾಣ ಅವನ ಎದೆಗೆ ಚುಚ್ಚಿ, ರಕ್ತದೋಕುಳಿ ಹರಿಯುತ್ತಿತ್ತು. ರಾಮ ಅವನ ಬಳಿಗೆ ಬಂದ.




**10**












ನಾವು ಸಂಪೂರ್ಣವಾಗಿ ಭಗವಂತನಲ್ಲಿ ಶರಣಾಗತರಾದಾಗ ಆಸೆ, ಮೋಹ, ಬಂಧನಗಳೆಲ್ಲ ತಾವಾಗಿಯೇ ಕಳಚಿಹೋಗುವುವು. ಇದು ಶರಣಾಗತಿಯ ಮಹಿಮೆ.




## ಸುದ್ದಿ ಸಂಚಯ

# ತಿರುಪತಿಯಲ್ಲಿ ಶ್ರೀರಾಮಕೃಷ್ಣ ಮಿಷನ್ ಆರಂಭ

೨೦೧೫ರ ಆಗಸ್ಟ್ ೬ರಂದು ತಿರುಪತಿಯಲ್ಲಿರುವ **ಶ್ರೀರಾಮಕೃಷ್ಣ ಸೇವಾ ಸಮಿತಿ**ಯನ್ನು ಹಲವು ಮಂದಿ ರಾಮಕೃಷ್ಣ ಮಿಷನ್ನಿನ ಸಾಧುಗಳ, ತಿರುಮಲ ತಿರುಪತಿ ದೇವಸ್ಥಾನದ ಅಧಿಕಾರಿಗಳ, ಗಣ್ಯ ನಾಗರಿಕರ ಹಾಗೂ ಅಪಾರ ಸಂಖ್ಯೆಯ ಭಕ್ತರ ಸಮ್ಮುಖದಲ್ಲಿ ರಾಮಕೃಷ್ಣ ಮಿಷನ್ನಿಗೆ ಹಸ್ತಾಂತರಿಸಲಾಯಿತು. ಈ ಮೂಲಕ ಶ್ರೀರಾಮಕೃಷ್ಣ ಮಹಾಸಂಘದ ಹೊಸ ಶಾಖೆಯೊಂದು ತಿರುಪತಿಯಲ್ಲಿ ಆರಂಭವಾಯಿತು. ೧೯೮೧ರಲ್ಲಿ ಸ್ಥಾಪಿತವಾಗಿದ್ದ ಸಮಿತಿಯು ತಿರುಪತಿಯ ವಿನಾಯಕ ನಗರದಲ್ಲಿ ಒಂದು ಎಕರೆ ಪ್ರದೇಶದ ಆವರಣದಲ್ಲಿ ನಡೆಯುತ್ತಿದ್ದು, ಆ ಪ್ರದೇಶವನ್ನು **ಟಿ.ಟಿ.ಡಿ.**ಯು (ತಿರುಮಲ ತಿರುಪತಿ ದೇವಸ್ಥಾನಂ) ಲೀಸ್‌ಗೆ ನೀಡಿತ್ತು. ಶ್ರೀರಾಮಕೃಷ್ಣರ ಮಂದಿರ ಹಾಗೂ ಕಚೇರಿ, ಪುಸ್ತಕ ಮಳಿಗೆ, ಗ್ರಂಥಾಲಯ, ಭೋಜನಶಾಲೆ, ವಾಸದ ಕೊಠಡಿಗಳನ್ನೊಳಗೊಂಡ ಮೂರು ಮಹಡಿಯ ಕಟ್ಟಡವನ್ನು ಸಮಿತಿಯು ಈಗಾಗಲೇ ನಿರ್ಮಿಸಿದೆ. ೧೯೯೮ರಲ್ಲಿ ಪರಮಪೂಜ್ಯ ಸ್ವಾಮಿ ರಂಗನಾಥಾನಂದಜಿ ಮಹಾರಾಜ್ ದೇವಾಲಯವನ್ನು ಉದ್ಘಾಟಿಸಿದ್ದರು.

ಆಗಸ್ಟ್ ೬ ರಂದು ಬೆಳಿಗ್ಗೆ ಶ್ರೀರಾಮಕೃಷ್ಣರ ವಿಶೇಷ ಪೂಜೆ ಹಾಗೂ ಹೋಮದೊಂದಿಗೆ ಹಸ್ತಾಂತರ ಸಮಾರಂಭ ಆರಂಭವಾಯಿತು. ಪೂಜ್ಯ ಸ್ವಾಮಿ ಗೌತಮಾನಂದಜಿ ಮಹಾರಾಜ್ ಅವರು ಆಶೀರ್ವಚನ ನೀಡಿ ಮಾತನಾಡಿದರು.

ಸಾಯಂಕಾಲ ಸಾರ್ವಜನಿಕ ಸಭೆ ನಡೆಯಿತು. ಟಿ.ಟಿ.ಡಿ.ಯ ಆಸ್ಥಾನ ವಿದ್ವಾಂಸರಾದ ವಿದ್ವಾನ್ ಶ್ರೀ ಜಿ. ಬಾಲಕೃಷ್ಣ ಹಾಗೂ ಬಳಗದವರಿಂದ ನಡೆದ **ಅನ್ನಮಾಚಾರ್ಯ ಸಂಕೀರ್ತನೆ**ಯೊಂದಿಗೆ ಸಭೆ ಆರಂಭವಾಯಿತು. ಸಮಿತಿಯ ಕಾರ್ಯದರ್ಶಿಗಳಾದ ಶ್ರೀಪಿ.ವಿ. ರೆಡ್ಡಿಯವರು ಅತಿಥಿಗಳನ್ನು ಸ್ವಾಗತಿಸಿ, ಸಮಿತಿಯ ಸಂಕ್ಷಿಪ್ತ ವರದಿಯನ್ನು ಓದಿದರು. ಅನಂತರ ಅವರು ಸಮಿತಿಯನ್ನು ರಾಮಕೃಷ್ಣ ಮಿಷನ್ನಿಗೆ ಹಸ್ತಾಂತರಿಸಿರುವುದಾಗಿ ಘೋಷಿಸಿದರು. ಟಿ.ಟಿ.ಡಿ. ವಿಶ್ವಸ್ತ ಮಂಡಳಿಯ ಅಧ್ಯಕ್ಷರಾದ ಶ್ರೀ ಚದಲವಾಡ ಕೃಷ್ಣಮೂರ್ತಿ, ಟಿಟಿಡಿ ಕಾರ್ಯನಿರ್ವಾಹಕ ಅಧಿಕಾರಿಗಳಾದ ಶ್ರೀ ಡಿ. ಸಾಂಬಶಿವರಾವ್, ಸ್ವಾಮಿ ಅನುಪಮಾನಂದಜಿ, ಸ್ವಾಮಿ ಅಭಿರಾಮಾನಂದಜಿ, ಸ್ವಾಮಿ ಮುಕ್ತಿಪದಾನಂದಜಿ, ಸ್ವಾಮಿ ಆತ್ಮವಿದಾನಂದಜಿ, ಟಿ.ಟಿ.ಡಿ. ಮಂಡಳಿ ಸದಸ್ಯರಾದ ಶ್ರೀ ಜಿ. ಭಾನುಪ್ರಕಾಶ ರೆಡ್ಡಿ, ಮಹಾಮಹೋಪಾಧ್ಯಾಯ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಮೊದಲಾದವರು ಸಭೆಯನ್ನು ಉದ್ದೇಶಿಸಿ ಮಾತನಾಡಿದರು. ಅಧ್ಯಕ್ಷೀಯ ಭಾಷಣ ಮಾಡುತ್ತ ಪೂಜ್ಯ ಸ್ವಾಮಿ ಗೌತಮಾನಂದಜಿ ಮಹಾರಾಜರು, 'ತಿರುಪತಿಯಲ್ಲಿ ರಾಮಕೃಷ್ಣ ಮಿಷನ್ನಿನ ಶಾಖೆಯನ್ನು ಆರಂಭಿಸುವ ಮೂಲಕ ತಿರುಪತಿಯ ಭಕ್ತಜನರ ಅನೇಕ ದಿನಗಳ ಅಭಿಲಾಷೆಯು ನೆರವೇರಿದಂತಾಗಿದೆ. ಇದು ತಿರುಪತಿ ನಗರದಲ್ಲಿ ನಡೆದ ಒಂದು ಚಾರಿತ್ರಿಕ ಘಟನೆಯಾಗಿದೆ' ಎಂದರು. ಸಮಿತಿಯ ಅಧ್ಯಕ್ಷರಾದ ಡಾ. ಜಿ. ಸುಗುಣ ಅವರು ವಂದನಾರ್ಪಣೆ ಮಾಡಿದರು. ಸಮೀಪದಲ್ಲಿರುವ ಶ್ರೀರಾಮಕೃಷ್ಣ ಮಹಾಸಂಘದ ಶಾಖೆಗಳಿಂದ ಬಂದ ಸ್ವಾಮೀಜಿಗಳು, ಆಂಧ್ರಪ್ರದೇಶ ಹಾಗೂ ತೆಲಂಗಾಣ ರಾಜ್ಯಗಳ **ಭಾವಪ್ರಚಾರ ಪರಿಷತ್ತಿ**ನ ಪ್ರತಿನಿಧಿಗಳು ಹಾಗೂ ಬೃಹತ್ ಸಂಖ್ಯೆಯ ಭಕ್ತರು, ಹಿತೈಷಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.





Managing Editor : Swami Muktidananda
Editor : Swami Jnanayoganananda

Printed and Published by Swami Muktidananda, on behalf of Sri Ramakrishna Ashrama, Yadavagiri, Mysore and Printed at Mayur Graphics, No.C-12, Industrial Estate, Rajaji Nagar, Bangalore -560 010 and published at Sri Ramakrishna Ashrama, Yadavagiri, Mysore -570 020

# ದಸರಾ ಹಬ್ಬದ ರಜೆಯಲ್ಲಿ ವಿದೇಶ ಪ್ರವಾಸ



| | |
|---|---|
| **3 ದಿನಗಳ ಅಹೋಬಿಲಂ ನವನಾರಸಿಂಹ ಪ್ರವಾಸ**<br>ಪ್ರವಾಸ ಸ್ಥಳಗಳು: ಜ್ವಾಲಾನರಸಿಂಹ, ಪಾವನನರಸಿಂಹ, ವರಹಾನರಸಿಂಹ, ಕಾರಂಜಿನರಸಿಂಹ, ಮಾಲೋಲನರಸಿಂಹ,<br>ಯೋಗನರಸಿಂಹ, ಭಾರ್ಗವನರಸಿಂಹ, ಉಗ್ರನರಸಿಂಹ, ಛತ್ರವಟನರಸಿಂಹ ಹಾಗೂ ಕೆಳಗಿನ ಲಕ್ಷ್ಮೀನರಸಿಂಹ | ಅಕ್ಟೋಬರ್, ನವೆಂಬರ್, ಡಿಸೆಂಬರ್ |
| **6 ದಿನಗಳ ಶ್ರೀಲಂಕಾ ಪ್ರವಾಸ (ರಾಮಾಯಣ ಕಾಲದ ಸ್ಥಳ ವೀಕ್ಷಣೆ)**<br>ಕೊಲೊಂಬೊ, ನೆಗೆಂಬೊ, ಕ್ಯಾಂಡಿ, ಡಾಂಬುಲಾ, ಸೀತಾ ಅಶೋಕವನ,<br>ಹನುಮಾನ್ ದೇವಸ್ಥಾನ ಹಾಗೂ ಶ್ರೀಲಂಕಾ ಸಾಂಸ್ಕೃತಿಕ ಕಾರ್ಯಕ್ರಮಗಳು | ಅಕ್ಟೋಬರ್, ನವೆಂಬರ್, ಡಿಸೆಂಬರ್ |
| **10 ದಿನಗಳ ಚೈನಾ, ಹಾಂಕಾಂಗ್, ಮಕಾವ್ ಪ್ರವಾಸ**<br>ಆಕ್ರೋಬೆಟಿಕ್ ಶೋ, ಓಷನ್ ಪಾರ್ಕ್, ಬೀಜಿಂಗ್, ಶಾಂಘೈ<br>ಸಮ್ಮರ್ ಪ್ಯಾಲೇಸ್, ಮ್ಯೂಸಿಯಂ ಹಾಂಕಾಂಗ್ ಮತ್ತು ಮಕಾವ್ | ಅಕ್ಟೋಬರ್ |
| **5 ದಿನಗಳ ದುಬೈ, ಅಬುದಾಬಿ, ಶಾರ್ಜ ಪ್ರವಾಸ**<br>ದುಬೈ ಸಿಟಿ ಟೂರ್, ಬುರ್ಜ್ ಕಲೀಫಾ, ಡೌ ಕ್ರೂಸ್, ಡೆಸರ್ಟ್ ಸಫಾರಿ<br>ಅಬುದಾಬಿ ಸಿಟಿ ಟೂರ್, ಶಾರ್ಜ ಸಿಟಿ ಟೂರ್ | ಅಕ್ಟೋಬರ್, ನವೆಂಬರ್, ಜನವರಿ |
| **7 ದಿನಗಳ ಸಿಂಗಾಪುರ – ಮಲೇಶಿಯ ಪ್ರವಾಸ**<br>ಸಿಂಗಾಪುರ : ಸಿಟಿ ಟೂರ್, ಸೆಂಟೋಸ ಐಲ್ಯಾಂಡ್, ಬರ್ಡ್‌ಪಾರ್ಕ್, ಸಾಂಗ್ ಆಫ್ ಸೀ<br>ಮಲೇಶಿಯ : ಕೌಲಲೊಂಪುರ್ ಸಿಟಿ ಟೂರ್, ಬಾಟು ಗುಹೆ,ಪುತ್ರಜಯ, ಜಂಟಿಂಗ್ ಹೈಲ್ಯಾಂಡ್,<br>ಮಲಾಕ ಸಿಟಿ ಟೂರ್, ಮಲಾಕ ಫೆರ್ರಿ, ಜುಹೊರ್‌ಬಾರು | ಅಕ್ಟೋಬರ್, ನವೆಂಬರ್, ಡಿಸೆಂಬರ್ |
| **8 ದಿನಗಳ ಕಾಂಬೋಡಿಯಾ – ಥೈಲ್ಯಾಂಡ್ ಪ್ರವಾಸ**<br>ಕಾಂಬೋಡಿಯಾ – ಸಿಯಾಮ್‌ರಿಪ್, ಅಂಕೂರ್‌ವಾಟ್, ಟೋನ್ ಸ್ಯಾಪ್ ಸರೋವರ,<br>ತಾಪ್ರಾಮ್, ಬಯಾನ್, ಬಪೂನ್ ದೇವಾಲಯಗಳು, ಥೈಲ್ಯಾಂಡ್ – ಪಟ್ಟಾಯ,<br>ಕೋರಲ್ ಐಲ್ಯಾಂಡ್, ಸಫಾರಿ ವರ್ಲ್ಡ್ ಹಾಗೂ ಬ್ಯಾಂಕಾಕ್ ಸಿಟಿ ಟೂರ್, ವಾಕರ್ ಸ್ಟ್ರೀಟ್ | ನವೆಂಬರ್, ಡಿಸೆಂಬರ್ |
| **18 ದಿನಗಳ ಆಸ್ಟ್ರೇಲಿಯಾ ಮತ್ತು ನ್ಯೂಜಿಲ್ಯಾಂಡ್ ಪ್ರವಾಸ**<br>ಸಿಡ್ನಿ, ಗೋಲ್ಡ್ ಕೋಸ್ಟ್, ಕೈರ್ನ್ಸ್, ಮೆಲ್ಬೋರ್ನ್ (ಆಸ್ಟ್ರೇಲಿಯಾ)<br>ಆಕ್ಲೆಂಡ್, ರೊಟೂರಾ, ಕ್ವೀನ್ಸ್‌ಟೌನ್, ಕ್ರೈಸ್ಟ್‌ಚರ್ಚ್ (ನ್ಯೂಜಿಲ್ಯಾಂಡ್) | ನವೆಂಬರ್, ಡಿಸೆಂಬರ್ |

## Orchid Travel & Tours

ವಿದೇಶ ಪ್ರವಾಸಗಳು

# 98, 1st Floor, D.V.G. Road, Basavanagudi, Bangalore - 560 004.

Tel : 080-26670646, 26621983 www.orchidtours.net

ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ : 9900080799, 9900080793, 9900080794

VIVEKA PRABHA (KANNADA MONTHLY)
October 2015 , Vol.16, No.10, No. of pages : 44

Registered With Registrar of News Papers Of India
under 72356/2000.postal Regn.No.KA/SK/MYS/480/
2015-17. LICENCED TO POST W.P.P.AT YADAVAGIRI
MYSORE 570 020,VIDE LICENCE NO.SK/WPP/MYS/155/2013-15



Printed at mayur graphics,Bangalore